# ಹಾನಗಲ್ ಪರಿಸರದ ಕೆರೆ, ಮತ್ತು ಬಾವಿಗಳ ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಸಂಪ್ರಬಂಧ)

ನೋಂದಣಿ ಸಂಖ್ಯೆ : ೧೫೦೧೦೮೦೩.೦೦೧೪





ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೬-೧೭

# ಹಾನಗಲ್ ಪರಿಸರದ ಕೆರೆ, ಮತ್ತು ಬಾವಿಗಳ ಒಂದು ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)



ನೋಂದಣಿ ಸಂಖ್ಯೆ : ೧೫೦೧೦೮೦೩೦೦೧೪



ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

೨೦೧೭

# ಪರಿವಿಡಿ

## ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ, ವಿಧಾನ ಮತ್ತು ಸ್ವರೂಪ

**ಪ್ರಸ್ತಾವನೆ :**

ನೀರು ಪಂಚಭೂತಗಳಲ್ಲಿ ಒಂದಾಗಿದ್ದು ಭೂಮಿಯ ಮೇಲಿನ ಸಕಲ ಚರಾಚರ ಜೀವಿಗಳಿಗೆ ಮೂಲಾಧಾರವಾಗಿದೆ. ನೀರಿಲ್ಲದೆ ಯಾವುದೇ ಜೀವಿಯು ಬದುಕುವುದು ಅಸಾಧ್ಯವಾಗಿದೆ. ಮಾನವನ ವಿಕಾಸದಲ್ಲಿಯೂ ನೀರಿನ ಪಾತ್ರ ಅತೀ ಮುಖ್ಯವಾಗಿದೆ. ಮಾನವನ ಇತಿಹಾಸವನ್ನು ನೋಡಿದಾಗ ಭೂಮಿಯ ಮೇಲಿನ ಪ್ರತಿಯೊಂದು ನಾಗರಿಕತೆಯು ನದಿಯ ಬಯಲಿನಲ್ಲಿ ಬೆಳೆದು ಬಂದಿರುವುದನ್ನು ನೋಡಿದರೆ ಮಾನವ ಜೀವನದಲ್ಲಿ ನೀರಿನ ಮಹತ್ವ ಎಷ್ಟೆಂಬುದು ಅರ್ಥವಾಗುತ್ತದೆ.

ಆರಂಭ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವ ದೀರ್ಘಾವಧಿಯಲ್ಲಿ ನಾಗರಿಕ ಬದುಕಿನತ್ತ ಹೆಜ್ಜೆ ಹಾಕುತ್ತಾ ಬದುಕನ್ನು ನಿರ್ಮಿಸಿಕೊಂಡಿದ್ದಾನೆ. ಇಂತಹ ಮಹತ್ವದ ಕಾಲಘಟ್ಟದಲ್ಲಿ ಆತನ ಬದುಕಿನ ಶೈಲಿಯಲ್ಲಿ ಮಹತ್ವದ ಬದಲಾವಣೆಗಳಾಗಿವೆ. ಅಲೆಮಾರಿತನಕ್ಕೆ ವಿದಾಯ ಹೇಳಿದ ಮಾನವ ತನ್ನ ಜೀವನದ ನಿರ್ವಹಣೆಗೆ ಕೃಷಿಯನ್ನೇ ಆಯ್ದುಕೊಂಡ, ಕೃಷಿಯು ಬದುಕಿನ ಪ್ರಮುಖ ಅಂಗವಾಗಿ ಉಳಿದುಕೊಂಡು ಬಂದಿದೆ. ಮಾನವನ ಕಲ್ಯಾಣವು ವ್ಯವಸಾಯದ ಉತ್ಪನ್ನಗಳ ಮೇಲೆ ಆಧಾರವಾಗಿದೆ. ಸಮೃದ್ಧ ವ್ಯವಸಾಯದ ಉತ್ಪನ್ನಗಳಿಗಾಗಿ ನಾಗರಿಕ ಸಮಾಜವು ಮಳೆಯನ್ನು ಅವಲಂಬಿಸಿದೆ. ಆದರೆ ಮಳೆಯ ವ್ಯತ್ಯಾಸದಿಂದ ಒಂದಿಲ್ಲೊಂದು ಭಾಗವು ಅನಾವೃಷ್ಟಿ ಮತ್ತು ಅತೀ ವೃಷ್ಟಿಗೆ ಬಲಿಯಾಗಿ ಅದರಿಂದ ವ್ಯವಸಾಯ ಕುಂಠಿತಗೊಂಡು, ಜನರು ಸಂಕಷ್ಟಗಳಿಗೆ ಈಡಾಗುತ್ತಿದ್ದ ನಿದರ್ಶನಗಳು ಹೆಚ್ಚಾಗಿ ಕಂಡು ಬಂದಿದೆ. ಇಂತಹ ಸಂದರ್ಭದಲ್ಲಿ ಕೆರೆ, ಕಟ್ಟೆಗಳ ನೀರು ಮಾನವನಿಗೆ ಎಲ್ಲಾ ಕಾಲದಲ್ಲಿಯೂ ಪೂರೈಕೆಯಾಗಿದ್ದು ಬೆಳೆಗಳನ್ನು ಕಾಪಾಡಲು ಸಾಧ್ಯಮಾಡಿತಲ್ಲದೆ ಅದರ ಉತ್ಪನ್ನಗಳನ್ನು ನಿಶ್ಚಿತವಾಗಿ ಪಡೆಯಬಹುದೆಂಬ ಭರವಸೆಯನ್ನು ಹುಟ್ಟಿಸಿತು. ಈ ಸುರಕ್ಷತೆಯ ಭಾವನೆ ಅದರ ಉತ್ಪನ್ನಗಳನ್ನು ನಿಶ್ಚಿತವಾಗಿ ಪಡೆಯಬಹುದೆಂಬ ಭರವಸೆಯನ್ನೇ ಹುಟ್ಟಿಸಿತು. ಈ ಸುರಕ್ಷತೆ ಎಂಬ ಭಾವನೆ ಮನುಷ್ಯನ ಆತ್ಮ ವಿಶ್ವಾಸವನ್ನು ಹೆಚ್ಚಿಸಿತು. ಆದ್ದರಿಂದ, ನಮ್ಮ ದೇಶವನ್ನು ಒಳಗೊಂಡಂತೆ ಜಗತ್ತಿನ ಎಲ್ಲಕಡೆಯೂ ಮೊದಲಿನಿಂದಲೂ ಜನ ನೀರಿನ ಸಂಗ್ರಹಣೆ ಮತ್ತು ಪೂರೈಕೆಗೆ ಅನೇಕ ಕ್ರಿಯೆಗಳನ್ನು ಕೈಗೊಂಡಿರುವುದು ಕಂಡು ಬರುತ್ತದೆ. ಮಾನವ ಆದಿಕಾಲದಿಂದಲೂ ಕೆರೆ,

ಕಟ್ಟೆ, ಕುಂಟೆ, ಕಾಲುವೆ, ಹೊಂಡ ಮತ್ತು ಬಾವಿ ಮುಂತಾದವುಗಳನ್ನು ನಿರ್ಮಾಣ ಮಾಡಿಕೊಂಡಿರುವುದನ್ನು ಕಾಣುತ್ತೇವೆ. ಇವು ಮಾನವನ ನಿಶ್ಚಿತವಾದ ಬದುಕಿನ ಅಗತ್ಯತೆಗಳನ್ನು ಪೂರೈಸುವ ಪ್ರಾಥಮಿಕ ಮೂಲಗಳಾಗಿವೆ.

ಜನರಿಗೆ ಪ್ರಾಣಿಗಳಿಗೆ ಮತ್ತು ಬೇಸಾಯಕ್ಕೆ ನೀರಿನ ವ್ಯವಸ್ಥೆಯನ್ನು ಒದಗಿಸುವುದು ಒಂದು ಸಾಮಾಜಿಕ ಜವಾಬ್ದಾರಿ ಆಗಿರುತ್ತದೆ ಎಂದು ಪ್ರಾಚೀನ ಕಾಲದಲ್ಲಿಯ ಛೇದಿ ಮನೆತನದ ಖಾರವೇಲನ ಹಾಥೀಗುಂಪಾ ಶಾಸನದ ಆರನೆಯ ಸಾಲಿನಲ್ಲಿ ಉಲ್ಲೇಖಗೊಂಡಿರುವುದಾಗಿ ತಿಳಿದುಬರುತ್ತದೆ.

"ಭಿಂಗಾರೇ ಹಿತ ರತನ ಸಪಲೆಯೇ ಸವ' ರಠಿಕ ಭೂಜಕೆ ಪಾದೇ ವಂದಾಪಯತಿ (൧൧*) ಪಂಚಮೇ ಚ ದಾನೀ ವಸೇ ಮಂದರಾಜ ತಿವಸಸತ ಓಘಾಟಿತಂ ತನುಸುಲಿಯ ವಾಟಾ ಪನಾಡಿಂ ನಗರಂ ಪವೇಸತಿ ಸೋ....(൧*) ಅಭಿಸಿತೋ ಚ ಛಟೇವಸೇ ರಾಜಸೇಯಂ ಸಂದಂಸಯಂತೋ ಸವಕರವಣ" ರಾಜ ಖಾರವೇಲನು ತನ್ನ ಆಳ್ವಿಕೆಯ ಐದನೇಯ ವರ್ಷದಲ್ಲಿ ಆರುನೂರು ವರ್ಷಗಳಷ್ಟು ಹಿಂದೆ ಕಾಲವೆಯ ಮೂಲಕ ಕಳಿಂಗ ನಗರಕ್ಕೆ ನೀರು ಬರುವಂತೆ ಮಾಡಿರುವ ಉಲ್ಲೇಖ ಈ ಶಾಸನದಿಂದ ತಿಳಿಯುತ್ತದೆ.

ಇದರಿಂದ ನೀರಾವರಿ ವ್ಯವಸ್ಥೆಗಾಗಿ ಕರೆಗಳನ್ನು ಕಟ್ಟಿಸುವುದು, ಬಾವಿಗಳನ್ನು ತೋಡಿಸುವುದು ಅತೀ ಮುಖ್ಯವಾದ ಕೆಲಸವಾಗಿತ್ತು. ಅಲ್ಲದೆ ಇಂತಹ ಕಾರ್ಯಗಳಿಗೆ ಸಂಬಂಧಿಸಿದ ವ್ಯಕ್ತಿಯನ್ನು ಅವನು ಮಾಡಿದ ಕಾರ್ಯಗಳಿಂದ ಸಮಾಜದಲ್ಲಿ ವಿಶಿಷ್ಟವಾಗಿ ಬಿಂಬಿಸುವ ಪ್ರಯತ್ನದ ಫಲಿತಾಂಶಗಳು ಆಗಿವೆ.

ಭಾರತದಲ್ಲಿ ಪ್ರಾಗಿತಿಹಾಸಿಕ ಕಾಲದಿಂದಲೂ ಕೆರೆ, ಕಟ್ಟೆ, ಬಾವಿಗಳು ಕಂಡು ಬಂದಿವೆ. ಅವುಗಳ ಸಂಖ್ಯೆ ದಕ್ಷಿಣ ಭಾರತದಲ್ಲಿ ಹೆಚ್ಚಾಗಿದೆ. ಉತ್ತರ ಭಾರತದಲ್ಲಿ ಹಿಮಾಲಯದಲ್ಲಿ ಹುಟ್ಟಿದ ಅನೇಕ ಜೀವ ನದಿಗಳಿದ್ದು. ಇವು ವರ್ಷವಿಡೀ ಹರಿಯುವ ನದಿಗಳಾಗಿವೆ. ಅವು ಮಳೆಗಾಲದಲ್ಲಿ ಮಳೆ ನೀರಿನಿಂದ ತುಂಬಿ ಹರಿದರೆ ಬೇಸಿಗೆ ಕಾಲದಲ್ಲಿ ಹಿಮಾಲಯದ ನೀರು ಕರಗಿ ತುಂಬಿ ಹರಿಯುತ್ತವೆ. ಆದ್ದರಿಂದ ಅಲ್ಲಿ ನೀರಿನ ಸಂಗ್ರಹದ ಅವಶ್ಯಕತೆ ಕಂಡುಬರುವುದಿಲ್ಲ. ದಕ್ಷಿಣ ಭಾರತದ ನದಿಗಳು ಮಳೆಯನ್ನೆ ಅವಲಂಬಿಸಿರುವ ನದಿಗಳಾಗಿದ್ದು ಅಲ್ಲದೆ ದಕ್ಷಿಣ ಭಾರತದಲ್ಲಿ ಒಣ ಪ್ರದೇಶವೇ ಹೆಚ್ಚಾಗಿದ್ದು ಇಲ್ಲಿ ನೀರಿನ ಸಂಗ್ರಹಣೆಯು ಅವಶ್ಯಕತೆ ಹೆಚ್ಚಾಗಿರುವುದರಿಂದ ಇಲ್ಲಿ ಜಲಾಶಯಗಳು ಕೆರೆ, ಕಟ್ಟೆ ಮತ್ತು ಬಾವಿಗಳು ಹೆಚ್ಚಾಗಿ ಕಂಡುಬರುತ್ತವೆ.

ಕರ್ನಾಟಕವು ಬಹುಪಾಲು ಬೆಟ್ಟ ಮತ್ತು ಊರು ತಗ್ಗುಗಳಿಂದ ಕೂಡಿದ ಸಂಪದ್ಭರಿತ ನಾಡಾಗಿದೆ. ಇದು ಉತ್ತರದಲ್ಲಿ ಮಹಾರಾಷ್ಟ್ರ ದಕ್ಷಿಣದಲ್ಲಿ ಕೇರಳ ಮತ್ತು ತಮಿಳುನಾಡು ಪೂರ್ವದಲ್ಲಿ ಆಂಧ್ರಪ್ರದೇಶ ಮತ್ತು ಆಗ್ನೇಯದಲ್ಲಿ ಗೋವಾ ಮತ್ತು ಅರಬ್ಬೀ ಸಮುದ್ರದಿಂದ ಅವೃತವಾಗಿದೆ. ಈ ನಾಡಿನಲ್ಲಿ ಹಲವಾರು ನದಿಗಳು ಇರುವುದು ಕಂಡುಬರುತ್ತದೆ. ಉದಾ: ತುಂಗಭದ್ರಾ, ಬೇಡ್ತಿ, ಮಲಪ್ರಭಾ, ಘಟಪ್ರಭಾ, ಕೃಷ್ಣ ವರದಾ ಕಾವೇರಿ ನದಿಗಳಿವೆ. ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಕೆರೆ ಮತ್ತು ಬಾವಿಗಳ ನಿರ್ಮಾಣದ ಪ್ರಕ್ರಿಯೆಯನ್ನು ಕಾಣಬಹುದು. ಇದರಿಂದ ಕರ್ನಾಟಕದ ರಾಜ್ಯಾದ್ಯಂತ ಇಂದಿಗೂ ಕೃಷಿಗೆ ಅನುಕೂಲವಾಗುವಂತೆ ಸಾವಿರಾರು ಕೆರೆಗಳನ್ನು ನಾಡಿನ ಉದ್ದಗಲಕ್ಕೂ ಕಾಣಬಹುದು.

ಉತ್ತರ ಕರ್ನಾಟಕದ ಹೆಬ್ಬಾಗಿಲು ಆಗಿರುವ ಹಾವೇರಿ ಜಿಲ್ಲೆಯು ಏಳು ತಾಲೂಕುಗಳನ್ನು ಒಳಗೊಂಡಿದ್ದು ಅದರಲ್ಲಿ ಹಾನಗಲ್ಲ ತಾಲೂಕು ಸಹ ಒಂದು ಇತರೆ ಜಿಲ್ಲೆಗಳಿಗೆ ಹೋಲಿಸಿದರೆ ಹಾವೇರಿ ಜಿಲ್ಲೆಯ ಮಲೆನಾಡು ಪ್ರದೇಶವಾಗಿದ್ದು ಜನಜೀವನಕ್ಕೆ ಅತ್ಯಂತ ಉಪಯುಕ್ತ ಪ್ರದೇಶವಾಗಿದೆ. ಸಾಂಸ್ಕೃತಿಕವಾಗಿ ಹಾಗೂ ಐತಿಹಾಸಿಕವಾಗಿ ಹಾವೇರಿ ಜಿಲ್ಲೆಯು ಗಮನಾರ್ಹವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಹಾನಗಲ್ಲು ಪರಿಸರವು ತಾಲೂಕು ಪ್ರದೇಶವಾಗಿದ್ದು ಹಾವೇರಿ ಜಿಲ್ಲೆಯಿಂದ ೩೦ ಕಿ.ಮೀ. ದೂರದಲ್ಲಿದೆ. ಈ ಸ್ಥಳವು ಅನೇಕ ಐತಿಹಾಸಿಕ ಅವಶೇಷಗಳಿಂದ ಪ್ರಸಿದ್ಧಿ ಪಡೆದಿದೆ. ಹಾನಗಲ್ಲು ಪರಿಸರವು ೧೫೫ ಹಳ್ಳಿಗಳನ್ನು ಒಳಗೊಂಡಿದ್ದು, ಭೌಗೋಳಿಕವಾಗಿ ಬೆಟ್ಟ-ಗುಡ್ಡ, ಕೆರೆ, ಕಟ್ಟೆ ಬಾವಿಗಳಿಂದ, ಕೃಷಿ ಫಲವತ್ತಾದ ಕಪ್ಪು ಮತ್ತು ಕೆಂಪು ಮಿಶ್ರಿತವಾದ ಮಣ್ಣಿನಿಂದ ಕೂಡಿರುವ ಪ್ರದೇಶವಾಗಿದೆ. ಈ ಪ್ರದೇಶದಲ್ಲಿ ಬೆಳೆಯುವ ಹೆಚ್ಚಿನ ಬೆಳೆಗಳು ಮಳೆಯಾಧಾರಿತವಾಗಿವೆ.

**ಅಧ್ಯಯನದ ಉದ್ದೇಶ:**

ಇತಿಹಾಸವು ಮೂಲಾಧಾರಗಳನ್ನು ಅವಲಂಬಿಸಿದೆ. ಆದ್ದರಿಂದ ಇತಿಹಾಸವನ್ನು ನಾವು ಅಧ್ಯಯನ ಮಾಡಬೇಕಾದರೆ ಹಲವಾರು ಆಧಾರಗಳು ಇತಿಹಾಸದ ಅಧ್ಯಯನಕ್ಕೆ ಸಹಾಯಕವಾಗಿ ನಿಲ್ಲುತ್ತವೆ. ಹಾಗೇಯೇ ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕೆರೆ ಮತ್ತು ಬಾವಿಗಳ ಇತಿಹಾಸದ ಅಧ್ಯಯನ ಹಾಗೂ ಬಾವಿಗಳ ಮಹತ್ವ ತಿಳಿಯಲು ಹಲವಾರು ಶಾಸನಗಳು ಸಹಾಯಕವಾಗಿವೆ. ಈ ಶಾಸನಗಳ ಆಧಾರದ ಹಿನ್ನೆಲೆಯಲ್ಲಿ ಕೆರೆ ಮತ್ತು ಬಾವಿಗಳ ಕುರಿತಾದ? ಹೊಸ ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ಈ

ಅಧ್ಯಯನದಲ್ಲಿ ಮಾಡಲಾಗಿದೆ. ಹಾನಗಲ್ಲು ಪರಿಸರದಲ್ಲಿ ಸಣ್ಣ ಮತ್ತು ದೊಡ್ಡ ಕೆರೆಗಳು, ಪರಿಣಾಮ ರಹಿತವಾಗಿವೆ ದೊಡ್ಡ ಕೆರೆಗಳ ಪ್ರಮಾಣ ಸಾಕಷ್ಟು ಅವುಗಳ ಸಂರಕ್ಷಣೆ ಸಾಂಸ್ಕೃತಿಕ ವಿಧಾನಗಳು ಶಿಥಿಲವಾಗಿರುವುದೇ ಇದಕ್ಕೆ ಕಾರಣ. ಇತ್ತೀಚೆಗೆ ಸರಕಾರಗಳು ಸ್ಥಳೀಯ ಆಡಳಿತ ವ್ಯವಸ್ಥೆ ಹಾಗೂ ಸಂಘ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಜಲಸಂವರ್ಧನ ಯೋಜನೆಗಳು ಹಾಗೂ ಹಳೇ ಕೆರೆ ಮತ್ತು ಬಾವಿಗಳ ಜೀರ್ಣೋದ್ಧಾರ ಮಾಡುತ್ತಿದ್ದು ಆದರೆ ಇಂತಹ ಪ್ರಯತ್ನಗಳು ಸಾಕಷ್ಟು ಪರಿಣಾಮಕಾರಿಯಾಗಿ ಜಾರಿಗೆ ಬರದೇ ಇರುವುದು ದುಃಖಕರ ಸಂಗತಿಯಾಗಿದೆ. ಈ ಮೊದಲು ಕೆರೆಗಳ ಬಾವಿಗಳು ನಿರ್ಮಾಣ ಮತ್ತು ಮೇಲುಸ್ತುವಾರಿಯು ಗ್ರಾಮಗಳಲ್ಲಿರುವ ಸಮಿತಿಗಳ ಮೇಲ್ವಿಚಾರಣೆಯಲ್ಲಿ ಕಾರ್ಯಗತವಾಗಿತ್ತು ಆದ್ದರಿಂದ ಎಲ್ಲರಿಗೂ ಬೇಕಾದಷ್ಟು ನೀರನ್ನು ಸಮರ್ಪಕವಾಗಿ ಹಂಚುತ್ತಿದ್ದರು. ಆದರೆ ಈಗ ಅಲ್ಲಿ ಸಂಪೂರ್ಣ ಬದಲಾವಣೆಗಳಾಗಿ ನೀರಿನ ಹಂಚಿಕೆಯಲ್ಲಿ ಗೊಂದಲಗಳು ಉಂಟಾಗುತ್ತಿವೆ. ಜನರಿಂದ ನಿರ್ಲಕ್ಷ್ಯಕ್ಕೊಳಗಾದ ಕೆರೆ, ಕಟ್ಟೆ, ಬಾವಿಗಳು ಈಗ ಬರಡಾಗಿ ಹೋಗಿವೆ. ಕೆಲವು ಹಳ್ಳಿಗಳಲ್ಲಿ ಹಿಂದಿನ ಕೆರೆಗಳು ಇಂದು ಆಟದ ಮೈದಾನಗಳಾಗಿ ಅಥವಾ ವಾರದ ಸಂತೆಯ ಸ್ಥಳವಾಗಿ ಬದಲಾವಣೆಯಾಗಿದ್ದುದು ಕಂಡುಬರುತ್ತದೆ. ಅದಕ್ಕಾಗಿ ಗ್ರಾಮಗಳ ಜೀವನಾಡಿಗಳಾದ ಕೆರೆ ಮತ್ತು ಬಾವಿಗಳ ಕುರಿತು ಅಧ್ಯಯನ ಅವಶ್ಯಕವಾಗಿದೆ. ಈ ಪರಿಸರದ ಕೆರೆಗಳ ವ್ಯವಸ್ಥೆ ಇಂದಿನ ಅವುಗಳ ಸ್ಥಿತಿ–ಗತಿಗಳು ಕೆರೆಗಳ ಮತ್ತು ಬಾವಿಗಳ ರಚನೆ ಜಿರ್ಣೋದ್ಧಾರ ನಿರ್ವಹಣೆ ಮುಂತಾದವುಗಳನ್ನು ಆ ಕಾಲದ ಶಾಸನಾಧಾರ ಸಾಹಿತ್ಯ ಮೊದಲಾದ ಮಾಹಿತಿಗಳಿಂದ ತಿಳಿಯುವುದು ಅಧ್ಯಯನ ಉದ್ದೇಶವಾಗಿದೆ. ಕೆರೆಗಳನ್ನು ಏಕೆ ನಿರ್ಮಾಣ ಮಾಡಲಾಯಿತು. ಕೆರೆ ಮತ್ತು ಬಾವಿಗಳ ಪ್ರಾಮುಖ್ಯತೆ ಹಾಗೂ ಅವುಗಳ ಉಪಯೋಗವನ್ನು ತಿಳಿಯಲು ಪ್ರಸ್ತುತ ಅಧ್ಯಯನ ಸಹಾಯಕವಾಗಿದೆ. ಕೆರೆಗಳ ಭಾಗಗಳಾದ ಏರಿ ನಿರ್ಮಾಣ, ತೂಬುಗಳ ರಚನೆ, ಕಾಲುವೆ ಮತ್ತು ಕೋಡಿಗಳ ವ್ಯವಸ್ಥೆಯನ್ನು ತಿಳಿಯುವ ಪ್ರಯತ್ನ ಈ ಅಧ್ಯಯನದ್ದು. ಅಂದರೆ ಕೃಷಿ ನೀರಾವರಿಯಿಂದ ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆ ಹಾಗೂ ಮೀನುಗಾರಿಕೆಗೆ ಸಂಬಂಧಿಸಿದ ಸಂಗತಿಗಳನ್ನು ಈ ಅಧ್ಯಯನದಿಂದ ತಿಳಿಯಬಹುದು. ಹಾಗೆಯೇ ಕೆರೆ ಮತ್ತು ಬಾವಿಗಳ ನಿರ್ಮಾಣ ಮಾಡಿದಂತೆ ಅದರ ಉದ್ದೇಶ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ಅರಿಯುವ ಪ್ರಯತ್ನ ಪ್ರಸ್ತುತ ಈ ಅಧ್ಯಯನದ್ದಾಗಿದೆ.

ಅಲ್ಲದೆ ಇಂದಿನ ಆಧುನಿಕ ತಂತ್ರಜ್ಞಾನದ ಮೂಲಕ ಕೆರೆ, ಬಾವಿಗಳು ಜನ ಜೀವನದಲ್ಲಿ ಎಷ್ಟು ಸಹಕಾರಿಯಾಗಿವೆ ಎಂಬುದೂ ಮುಖ್ಯವಾಗಿದೆ. ಇಂದು ಮನುಷ್ಯನ ಜೀವನದಲ್ಲಿ ನೀರು ಅತೀ ಮುಖ್ಯವಾಗಿರುವುದರಿಂದ ಆದಷ್ಟು ಹೆಚ್ಚಿನ ಪ್ರಮಾಣದಲ್ಲಿ ನೀರ ಸಂಗ್ರಹಕಾರ್ಯ ಅನಿವಾರ್ಯವಾಗಿದೆ. ಸಣ್ಣ ಸಣ್ಣ ನದಿ ಹಳ್ಳಗಳಿಗೆ ಆಣೆಕಟ್ಟುಗಳನ್ನು ಕಟ್ಟುವದು ಅಸಾಧ್ಯ, ಆದರೆ ಅಲ್ಲಿ ಕೆರೆಗಳನ್ನು ಕಟ್ಟಿ ನೀರನ್ನು ಸಂಗ್ರಹ ಮಾಡಬಹುದು. ವೈಜ್ಞಾನಿಕತೆ ಬೆಳೆದಂತೆ ಕೈಗಾರಿಕೆಗಳ ಹೆಚ್ಚಳದಿಂದ ಸಮುದ್ರಗಳು, ನದಿಗಳು ಮಲೀನಗೊಳ್ಳುತ್ತಿವೆ. ಆದರೆ ಕೆರೆ ಬಾವಿಗಳು ಇಂತಹ ಪರಿಸ್ಥಿತಿಗೆ ಬರದೆ ಜನಜೀವನಕ್ಕೆ ಯಾವುದೇ ಹಾನಿಯನ್ನುಂಟು ಮಾಡುವುದಿಲ್ಲ ಎಂಬ ಅಂಶವನ್ನು ಬೆಳಕಿಗೆ ತರುವುದು ಈ ಅಧ್ಯಯನದ ಉದ್ದೇಶವಾಗಿದೆ. ಭಾರತವು ಹಳ್ಳಿಗಳ ನಾಡಾಗಿರುವ ಹಾಗೇ ಹಾನಗಲ್ಲು ಪರಿಸರವು ಕೂಡಾ ಹಳ್ಳಿಗಳಿಂದ ಕೂಡಿದೆ. ಆರ್ಥಿಕ ಕ್ಷೇತ್ರದಲ್ಲಿ ಕೆರೆಗಳ ಪಾತ್ರವನ್ನು ಜನರಿಗೆ ಮನವರಿಕೆ ಮಾಡುವುದು ಈ ಪ್ರಬಂಧದ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ:**

ಒಂದು ಅಧ್ಯಯನ ಯಶಸ್ವಿಯಾಗಬೇಕಾದರೆ ಅದಕ್ಕೆ ತನ್ನದೇ ಆದ ಚೌಕಟ್ಟು ಇರುತ್ತದೆ. ಆದ್ದರಿಂದ ವ್ಯಾಪ್ತಿ ಇರುವುದು ಬಹುಮುಖ್ಯ, ವ್ಯಾಪ್ತಿ ಇಲ್ಲದ ಅಧ್ಯಯನವು ಅಸ್ಪಷ್ಟತೆಯಿಂದ ಕೂಡಿರುತ್ತದೆ. ವ್ಯಾಪ್ತಿ ಇಲ್ಲದ ಅಧ್ಯಯನ ಪ್ರಾರಂಭದ ದಿಕ್ಕನ್ನು ತಪ್ಪಿಸುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಹಾನಗಲ್ಲು ಪರಿಸರದ ಕೆರೆ ಮತ್ತು ಬಾವಿಗಳ ಕುರಿತು ಅಧ್ಯಯನ ಮಾಡಲಾಗಿದ್ದು ಈ ಪ್ರದೇಶದ ಭೌಗೋಳಿಕತೆಯು ಕೆರೆ, ಭಾವಿಗಳ ಅಧ್ಯಯನದಲ್ಲಿ ಎಷ್ಟರ ಮಟ್ಟಿಗೆ ಸಹಾಯಕವಾಗಿದೆ ಎಂಬ ಹಿನ್ನೆಲೆಯಲ್ಲಿ ಇದರ ವ್ಯಾಪ್ತಿಯನ್ನು ಹಾನಗಲ್ಲು ತಾಲೂಕು ಪರಿಸರಕ್ಕೆ ನಿರ್ದಿಷ್ಟಗೊಳಿಸಲಾಗಿದೆ. ಈ ಪ್ರದೇಶವು ನೀರಾವರಿಯ ಜೊತೆಗೆ ಜನರ ಉಪಯೋಗಕ್ಕಾಗಿ ಬಹಳ ಹಿಂದಿನಿಂದಲೂ ಕೆರೆಗಳನ್ನು ಅವಲಂಬಿಸಿತ್ತು. ಈ ಪರಿಸರದ ವ್ಯಾಪ್ತಿಯಲ್ಲಿ ಸುಮಾರು ೭೮೬ ಕೆರೆಗಳಿದ್ದು ೧೧೨ ಮಧ್ಯಮ ಕೆರೆಗಳು ಮತ್ತು ೨೧೧ ದೊಡ್ಡ ಕೆರೆಗಳೆಂದು ವಿಂಗಡಿಸಬಹುದು. ಗ್ರಾಮ ಪಂಚಾಯತಿಯ ಮಾಹಿತಿ ಪ್ರಕಾರ ಈ ಅಧ್ಯಯನದ ದೃಷ್ಟಿಯಿಂದ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಪ್ರಮುಖ ಶಾಸನಗಳಲ್ಲಿ ಉಲ್ಲೇಖವಾಗಿರುವ ಕೆರೆಗಳ ಬಾವಿಗಳ ಅಧ್ಯಯನಕ್ಕೆ ಸೀಮಿತಗೊಳಿಸಲಾಗಿದೆ. ಹಾನಗಲ್ಲು ಪರಿಸರದ ಕೆರೆ ಮತ್ತು ಬಾವಿಗಳು ಕಲ್ಯಾಣ ಚಾಲುಕ್ಯರು, ಕದಂಬರು ಮತ್ತು ವಿಜಯನಗರ ಅರಸ ಕಾಲದಲ್ಲಿ ನಿರ್ಮಾಣವಾಗಿವೆ. ಈ ಅಧ್ಯಯನದ ವ್ಯಾಪ್ತಿ ಕೇವಲ ಕೆರೆ ಬಾವಿಗಳ ನಿರ್ಮಾಣ ಮತ್ತು

ನಿರ್ವಹಣೆಗೆ ಮಾತ್ರ ಸೀಮಿತವಾಗಿರದೇ ಕುಡಿಯುವ ನೀರು ಬಳಕೆಗೆ ಹಾಗೂ ಕೆರೆ ಬಾವಿಗಳ ಸಂಬಂಧಿಸಿದ ನಂಬಿಕೆ ಹಾಗೂ ಆಚರಣೆಗಳನ್ನು ಅಲ್ಲದೇ ಆ ಕೆರೆಗಳ ಹೆಸರಿನ ಹಿನ್ನೆಲೆಯನ್ನು ತಿಳಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗುವುದು.

**ಅಧ್ಯಯನದ ಸಮೀಕ್ಷೆ :**

ಯಾವುದೇ ಒಂದು ಪ್ರದೇಶವನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಆ ಪ್ರದೇಶದ ಬಗ್ಗೆ ಹಿಂದೆ ನಡೆದಿರುವ ಅಧ್ಯಯನಗಳನ್ನು ಅಭ್ಯಾಸಿಸಿದಾಗ ಮುಂದೆ ನಡೆಸುವ ಅಧ್ಯಯನಕ್ಕೆ ಸಹಾಯವಾಗುತ್ತದೆ. ಹಿಂದೆ ನಡೆದ ಅಧ್ಯಯನವು ಕತ್ತಲಲ್ಲಿ ಇರುವ ದಾರಿಗೆ ಬೆಳಕಿನ ದ್ವೀಪ ಪ್ರಜ್ವಲಿಸಿದಂತೆ. ಆದ್ದರಿಂದ ಹಾನಗಲ್ಲು ಪರಿಸರ ಅನಾದಿ ಕಾಲದಿಂದ ಇತಿಹಾಸ ಕಾಲದುದ್ದಕ್ಕೂ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದೆ. ಇವರು ನೀಡಿದ ಕೊಡುಗೆಯನ್ನು ಹಲವಾರು ವಿದ್ವಾಂಸರು ಅಧ್ಯಯನ ನಡೆಸಿ ಸಮಾಜಕ್ಕೆ ತಿಳಿಸಿಕೊಡುವ ಪ್ರಯತ್ನ ಮಾಡಿದ್ದಾರೆ. ಹಾನಗಲ್ಲು ಪರಿಸರವು ಶಾತವಾಹನರಿಂದ ಹಿಡಿದು ಸ್ವಾತಂತ್ರ್ಯ ಹೋರಾಟದವರೆಗೆ ಅಧ್ಯಯನ ನಡೆಸಲಾದ ಕೆಲವು ಕೃತಿಗಳು ಹೊರಬಂದಿವೆ. ಮೊದಲನೆಯದಾಗಿ ಚೆನ್ನಕ್ಕ ಪಾವಟೆ ಅವರ ಹಾನಗಲ್ಲ ಕದಂಬರು ಎಂಬ ಶೀರ್ಷಿಕೆ ಅಡಿಯಲ್ಲಿ ಪುಸ್ತಕವನ್ನು ರಚಿಸಿದ್ದು ಅದರಲ್ಲಿ ಹಾನಗಲ್ಲ ಕದಂಬರ ಮೂಲ ಮತ್ತು ಅವರು ನೀಡಿದ ಸಾಂಸ್ಕೃತಿಕ ಕೊಡುಗೆಗಳನ್ನು ಸವಿಸ್ತಾರವಾಗಿ ವಿವರಿಸಿದ್ದಾರೆ. ಸೂರ್ಯನಾಥ ಕಾಮಥರು ಧಾರವಾಡ ಜಿಲ್ಲೆ ಗೆಜೆಟಿಯರ್‌ನಲ್ಲಿ ಈ ಪ್ರದೇಶದ ಅಂಕಿ ಅಂಶಗಳು ಹಾಗೂ ಜನಾಂಗಗಳ ವಿವರಣೆಯನ್ನು ನೀಡಿದ್ದಾರೆ. ಹಂಪಿ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗವು ಸ್ಥಳೀಯ ಚರಿತ್ರೆ ಮತ್ತು ಮಾಲೆ ಹಾನಗಲ್ಲು ಎಂಬ ಪುಸ್ತಕದಲ್ಲಿ ಹಾನಗಲ್ಲಿನ ಪುರಾತತ್ವ ಮತ್ತು ಪರಿಸರದ ಕೆರೆ, ಕಟ್ಟೆ, ಧಾರ್ಮಿಕ ಸಾಂಸ್ಕೃತಿಕ ವಿಷಯಗಳನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಬಹುಮುಖ್ಯವಾಗಿ ಎಂ. ಎಂ. ಕಲಬುರ್ಗಿಯವರು ಪ್ರಕಟಿಸಿರುವ ಧಾರವಾಡ ಜಿಲ್ಲೆಯ ಶಾಸನ ಸೂಚಿಯು ಈ ಪರಿಸರದ ಶಾಸನಾತ್ಮಕ ವಿವರಗಳನ್ನು ನೀಡಿದೆ. ಭೋಜರಾಜ ಪಾಟೀಲರು ನಾಗರಖಂಡ-೭೦ ಎಂಬ ಶೀರ್ಷಿಕೆ ಅಡಿ ಹೊರಬಂದ ಪುಸ್ತಕದಲ್ಲಿ ಈ ಪರಿಸರ ಆಡಳಿತದ ಉಪ ವಿಭಾಗಗಳ ಬಗ್ಗೆ ಉಪಯುಕ್ತ ಮಾಹಿತಿಯನ್ನು ನೀಡಿದ್ದಾರೆ, ಹಾನಗಲ್ಲು ೫೦೦ ಆಡಳಿತ ವಿಭಾಗಗಳು ಎಂಬ ಅಧ್ಯಯನದಲ್ಲಿ ಶಾಂತಪುರಮಠ ಅವರು ಆಡಳಿತ ವಿಭಾಗ, ರಾಜರ ವಿವರಣೆ ಹಾಗೂ ಕೊಡುಗೆಗಳನ್ನು ಸಂಕ್ಷಿಪ್ತವಾಗಿ ನೀಡಿದ್ದಾರೆ. ಹಾನಗಲ್ಲು ಪರಿಸರದ ಮತ್ತೊಂದು

ಅಗ್ರಹಾರದ ಭಾಗವಾದ ಹಳ್ಳಿಗಳ ಪ್ರದೇಶದ ಬಗ್ಗೆ ಬಸವರಾಜ ಅರಿಷಿಣಗುತ್ತಿಯವರು ಆ ಪ್ರದೇಶದ ದೇವಾಲಯಗಳ ಬಗ್ಗೆ ಅಧ್ಯಯನ ಮಾಡಿ ಮೂರ್ತಿ ಶಿಲ್ಪಗಳ ಬಗ್ಗೆ ತಿಳಿಸಿದ್ದಾರೆ.

ಹಾನಗಲ್ಲು ಪರಿಸರದ ಬಗ್ಗೆ ಅನೇಕ ಬಿಡಿ ಲೇಖನಗಳು ಪ್ರಕಟವಾಗಿ ಅವುಗಳಲ್ಲಿ ಇತ್ತೀಚೆಗೆ ನಡೆದ ಸಮೀಕ್ಷೆಯ ಬಗ್ಗೆ ವಿವರವಾದ ಅಧ್ಯಯನ ಮತ್ತು ಮಾಹಿತಿಯನ್ನು ಕಾಲಕಾಲಕ್ಕೆ ಜನರಿಗೆ ತಿಳಿಯುವಂತೆ ಮಾಡಿದ್ದಾರೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆರೆಗಳ ಬಗ್ಗೆ, ಬಾವಿಗಳ ಬಗ್ಗೆ ವಿವರವಾದ ಅಧ್ಯಯನಗಳು ನೆಡೆದಿರುವುದಿಲ್ಲ. ಅರಸು ಮನೆತನ, ಆಡಳಿತ ವಿಭಾಗಗಳಲ್ಲದೆ ಯಾವುದೇ ಒಂದು ಜನವಸತಿಗೆ ನೀರು, ಬಹುಮುಖ್ಯವಾದ ಅಂಗ. ಆದಕಾರಣ ಪ್ರಾಚೀನ ಕಾಲದಲ್ಲಿ ಮಳೆ ನೀರನ್ನು ತಡೆಹಿಡಿಯುವ, ಅದನ್ನು ವ್ಯವಸ್ಥಿತವಾಗಿ ಬಳಸುವ ತಂತ್ರಜ್ಞಾನವನ್ನು ಅಧ್ಯಯನದ ಮೂಲಕ ಕಂಡುಕೊಳ್ಳುವ ಪ್ರಯತ್ನವಿದು.

**ಅಧ್ಯಯನದ ವಿಧಾನ ಮತ್ತು ಮಹತ್ವ:**

ಹಾನಗಲ್ಲು ಪರಿಸರದ ಕೆರೆ-ಬಾವಿಗಳ ಕುರಿತು. ಅಧ್ಯಯನವು ಪ್ರಮುಖವಾಗಿ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಇದರ ಬಗ್ಗೆ ಇದುವರೆಗೂ ನೆಡೆದಿರುವ ಅಧ್ಯಯನಗಳನ್ನು ಗಮನದಲ್ಲಿ ಇಟ್ಟುಕೊಂಡು ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳಲ್ಲಿನ ಕೆರೆ ಬಾವಿಗಳ ಮಾಹಿತಿಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಕೆರೆ ಬಾವಿಗಳಿಗೆ ಸಂಬಂಧಿಸಿದ ಭೌತಿಕ ರಚನೆಗಳಾದ ಏರಿ, ತೂಬು, ಕೋಡಿ, ಕಾಲುವೆಗಳು ಮತ್ತು ಬಾವಿಗಳ ವಿನ್ಯಾಸ, ಬಾವಿಗಳ ಆವರಣ ಗಡಗಡೆಗಳ ಛಾಯಾಚಿತ್ರಗಳನ್ನು ವಿವರವಾಗಿ ಸಂಗ್ರಹಿಸಲಾಗಿದೆ. ಕೆರೆ-ಬಾವಿಗಳಿಗೆ ಸಂಬಂಧಿಸಿದ ಮೌಖಿಕ ವಿವರಗಳನ್ನು ವ್ಯಕ್ತಿಗಳನ್ನು ಭೇಟಿ ಮಾಡಿ ವಿಷಯದಲ್ಲಿನ ಹಾಗೂ ಈಗಾಗಲೇ ಪ್ರಕಟಗೊಂಡಿರುವ ಶಾಸನಗಳು ಹಾಗೂ ಅಲ್ಲಿರುವ ದೇವಾಲಯಗಳನ್ನು ಅಧ್ಯಯನಕ್ಕೆ ಅನುಕೂಲವಾಗುವಂತೆ ಅವುಗಳ ಮಾಹಿತಿಯನ್ನು ಅಳವಡಿಸಿಕೊಳ್ಳಲಾಗಿದೆ.

ಕೆರೆಗಳ ಬಗ್ಗೆ ನೀರಾವರಿ ಇಲಾಖೆ ನೀಡಿದ ದಾಖಲೆಗಳು ಹಾಗೂ ಕೃಷಿ ಇಲಾಖೆಯಿಂದ ಬೆಳೆಗಳಿಗೆ ಸಂಬಂಧಿಸಿದ ವರದಿಗಳನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಪೂರಕವಾಗಿರುವ ಗ್ರಂಥಗಳಿಂದಲೂ ಮಾಹಿತಿ ಪಡೆಯಲಾಗಿದೆ. ಗ್ರಂಥಾಲಯಗಳಲ್ಲಿ ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ದಾಖಲಿಸಿಕೊಂಡು ನಂತರ ವರ್ಗೀಕರಿಸಿ ವಿಷಯಗಳನ್ನು ಸಂಬಂಧಪಟ್ಟ ಅಧ್ಯಾಯಗಳಲ್ಲಿ ಅಳವಡಿಸಿಕೊಂಡು ವಸ್ತು ನಿಷ್ಠವಾಗಿ

ಸಿದ್ಧಪಡಿಸಲಾಗಿದೆ. ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಧಾನಗಳ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸುವ ಪ್ರಯತ್ನ ಮಾಡಲಾಗಿದೆ.

**ಇತಿಹಾಸದ ಸ್ವರೂಪ:**

ನಾವು ಇತಿಹಾಸವನ್ನು ಅಧ್ಯಯನ ಮಾಡುವಾಗ, ಹಲವಾರು ಆಧಾರಗಳು ಇತಿಹಾಸದ ಅಧ್ಯಯನಕ್ಕೆ ಸಹಾಯಕವಾಗಿ ನಿಲ್ಲುತ್ತವೆ. ಹಾಗೆಯೇ ಪ್ರಸ್ತುತ ಪ್ರಬಂಧವು ಹಾನಗಲ್ಲ ತಾಲೂಕಿನ ಇತಿಹಾಸ ರಚಿಸುವಲ್ಲಿ ಪ್ರಮುಖ ಮೂಲಾಧಾರವಾಗಿ ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ. ಪ್ರಸ್ತುತ "ಹಾನಗಲ್ಲು ಪರಿಸಢ'' ಕೆರೆಗಳ ಅಧ್ಯಯನ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಐದು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ ಅಧ್ಯಯನದ ಉದ್ದೇಶ ಹಾಗೂ ವ್ಯಾಪ್ತಿಗಳನ್ನು ಈಗಾಗಲೇ ನಡೆದಿರುವ ಅಧ್ಯಯನದ ಸಮೀಕ್ಷೆ ಮತ್ತು ವಿಧಾನಗಳ ಬಗ್ಗೆ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಹಾನಗಲ್ಲು ತಾಲೂಕಿನ ಭೌಗೋಳಿಕ ಪರಿಚಯ ಹಾಗೂ ಪ್ರಾಚೀನ ಇತಿಹಾಸ, ಅದರ ಚಾರಿತ್ರಿಕ ಹಿನ್ನೆಲೆ ಮತ್ತು ರಾಜಕೀಯ ಇತಿಹಾಸವನ್ನು ಪ್ರಸ್ತಾಪಿಸಲಾಗಿದೆ. ಈ ಭೌಗೋಳಿಕ ಪರಿಚಯದಲ್ಲಿ ತಾಲೂಕಿನ ವಿಸ್ತೀರ್ಣ ಅದರ ನೆರೆಹೊರೆಯ ಪ್ರದೇಶಗಳು, ಬೆಟ್ಟ ಗುಡ್ಡಗಳು, ಮಳೆ, ಹವಾಗುಣ, ಮಣ್ಣಿನ ವಿಧಗಳು, ಜಲ ಸಂಪನ್ಮೂಲಗಳು, ಖನಿಜ ಸಂಪನ್ಮೂಲಗಳು, ಅರಣ್ಯ ಸಂಪತ್ತು, ಜನಸಂಖ್ಯೆ, ಜಾತಿ, ಲಿಂಗಾನುಪಾತ, ಶಿಕ್ಷಣ ಮತ್ತು ಕೃಷಿ ಬೆಳೆಗಳ ಬಗ್ಗೆ ವಿವರಿಸಲಾಗಿದೆ. ಅಲ್ಲದೇ ಇತಿಹಾಸದಲ್ಲಿ ಈ ತಾಲೂಕಿನ ಮಹತ್ವವನ್ನು ಮತ್ತು ಅಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಬಗ್ಗೆ ಅವರ ಕಾಲದಲ್ಲಿ ನಿರ್ಮಾಣವಾದ ಕೆರೆಗಳ ಬಗ್ಗೆ ತಿಳಿಯಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹಾನಗಲ್ಲು ಪರಿಸರದ ಕೆರೆಗಳ ಹೆಸರುಗಳು, ಕೆರೆ ನಿರ್ಮಾಣ ಮತ್ತು ನಿರ್ವಹಣೆ, ಮೇಲೆ ಬೆಳಕು ಚೆಲ್ಲುವುದಾಗಿದೆ. ಸಾಮಾನ್ಯವಾಗಿ ಕೆರೆಗಳು ಆ ಊರಿನ ಹೆಸರಿನಿಂದಲೇ ಕರೆಯಲಾಗುತ್ತದೆ. ಆದರೆ ಈ ಪ್ರದೇಶದಲ್ಲಿ ಕೆಲವು ಕೆರೆಗಳಿಗೆ ಸ್ತ್ರೀಯರ ಹೆಸರುಗಳನ್ನು ಇಟ್ಟಿರುವುದು ಕಂಡುಬರುತ್ತದೆ. ಅದಕ್ಕಾಗಿ ಈ ಅಧ್ಯಾಯದಲ್ಲಿ

ಕೆರೆಗಳ ನಿರ್ಮಾಣದ ಕಾಲ, ಕಾರಣಗಳು ಮತ್ತು ಅದರ ಹೆಸರಿನ ಹಿಂದಿನ ಇತಿಹಾಸವನ್ನು ತಿಳಿಯಲು ಪ್ರಯತ್ನಿಸಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬಾವಿಗಳ ನಿರ್ಮಾಣಕ್ಕೆ ಸಂಬಂಧಿಸಿದ ಕೆಲವು ಮುಖ್ಯ ಭಾಗಗಳು ಹಾಗೂ ಪ್ರಾಚೀನ ಹೆಸರುಗಳು, ನಾಮಾವಳಿಗಳು ಹಾಗೂ ಬಾವಿ ನೀರಿನ ಉಪಯೋಗದ ಕ್ರಮಗಳು, ಬಾವಿಗಳ ನಿರ್ಮಾಣದ ಉದ್ದೇಶದ ಬಗ್ಗೆ ಬೆಳಕು ಚೆಲ್ಲುವುದಾಗಿದೆ.

ಐದನೆಯ ಅಧ್ಯಾಯದಲ್ಲಿ ಕೆರೆ ಬಾವಿಗಳಿಗೆ ಸಂಬಂಧಿಸಿದ ನಂಬಿಕೆ ಮತ್ತು ಆಚರಣೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಆರನೆಯ ಅಧ್ಯಾಯವು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತಾಂಶಗಳನ್ನು ಮತ್ತು ಅನಿಸಿಕೆಗಳನ್ನು ವಿಶ್ಲೇಷಣಾತ್ಮಕವಾಗಿ ವಿವರಿಸುವ ಪ್ರಯತ್ನವಾಗಿದೆ.

ಅನುಬಂಧದಲ್ಲಿ ಗ್ರಂಥಸೂಚಿ, ಪದಕೋಶ, ವಕ್ತೃಗಳ ವಿವರಗಳಿದ್ದು ಅಧ್ಯಯನಕ್ಕೆ ಸಂಬಂಧಿಸಿದ ನಕ್ಷೆಗಳು, ಛಾಯಾಚಿತ್ರಗಳನ್ನು ಅವಶ್ಯಕತೆಯ ಹಿನ್ನೆಲೆಯಲ್ಲಿ ಅಳವಡಿಸಿಲಾಗಿದೆ.

## ಅಧ್ಯಾಯ – ೨

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

**ಭೌಗೋಳಿಕ ಹಿನ್ನೆಲೆ :**

ಸದಾ ಹಚ್ಚಹಸಿರಾಗಿರುವ ಹಾನಗಲ್ಲು ಪರಿಸರ, ಹಾವೇರಿ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿದ್ದು. ಧರ್ಮಾನದಿಯ ಎಡ ದಂಡೆಯ ಮೇಲೆ ಈ ನಗರವಿದೆ. ಈ ಪರಿಸರದ ಭೌಗೋಳಿಕ ಹಿನ್ನೆಲೆಯ ಮೆರೆಗಳನ್ನು ನೋಡಿದಾಗ ಯಾವುದೇ ಒಂದು ಪ್ರದೇಶ ಇತಿಹಾಸದಲ್ಲಿ ಹೆಸರು ಉಳಿಸಿಕೊಳ್ಳಬೇಕಾದರೆ ಮುಖ್ಯವಾಗಿ ಆ ಪ್ರದೇಶದ ಭೂ ವಿಸ್ತಾರ ಮತ್ತು ಅಲ್ಲಿರುವ ಹವಾಗುಣ ಮಳೆ, ಬೆಟ್ಟ–ಗುಡ್ಡ, ವ್ಯಾಪಾರ. ಪರಿಸರದ ಸಸ್ಯ ಸಂಪತ್ತು, ಪ್ರಾಣಿ ಸಂಪತ್ತು, ಅಂಕಿ–ಅಂಶಗಳು ನಮಗೆ ಬಹು ಮುಖ್ಯವಾಗಿ ಸುವ್ಯವಸ್ಥೆಯಲ್ಲಿ ಇರಬೇಕು. ಅದೇ ರೀತಿಯಾಗಿ ಹಾನಗಲ್ಲು ಪರಿಸರವು ಪ್ರಾಚೀನ ಕಾಲದಿಂದ ಇಂದಿನ ಕಾಲದವರೆಗೂ ಜನಜೀವನ ಕಾಲದಿಂದ ಕಾಲಕ್ಕನುಗುಣವಾಗಿ ಬದಲಾಗುತ್ತಾ ಬಂದಿದೆ. ಮತ್ತು ಇತಿಹಾಸದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಈ ಎಲ್ಲಾ ಅಂಶಗಳು ಇಲ್ಲಿನ ಪರಿಸರಕ್ಕೆ ಪೂರಕ ಅಂಶಗಳನ್ನು ಒದಗಿಸಿವೆ.

**ವಿಸ್ತೀರ್ಣ :**

ಹಾನಗಲ್ಲು ೧೫೫ ಗ್ರಾಮಗಳನ್ನೊಳಗೊಂಡು, ೭೭೫೨೦ ಹೆಕ್ಟೇರ್ ಅಥವಾ ೪೭೮೬.೮೩ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ಹಾವೇರಿ ಜಿಲ್ಲೆಯಲ್ಲಿ ಬ್ಯಾಡಗಿ, ಹಾನಗಲ್ಲು, ಹಾವೇರಿ, ಹಿರೇಕೆರೂರು, ರಾಣಿಬೆನ್ನೂರು, ಸವಣೂರು ಮತ್ತು ಶಿಗ್ಗಾಂವ ತಾಲೂಕುಗಳು ಸೇರಿವೆ. ಹಾನಗಲ್ಲು ನಗರ ಅಕ್ಷಾಂಶ ೧೪°.೪೫° ಮತ್ತು ರೇಖಾಂಶ ೭೫°-೦೫°ರ ಮಧ್ಯದಲ್ಲಿದೆ.[೧]

**ಮೇಲ್ಮೈ ಲಕ್ಷಣ :**

ಹಾನಗಲ್ಲು ಪರಿಸರದ ಪಶ್ಚಿಮಕ್ಕೆ ನಿಸರ್ಗ ರಮಣೀಯ ಅರಣ್ಯ ಸಂಪತ್ತುಳ್ಳ ಉತ್ತರ ಕನ್ನಡ ಜಿಲ್ಲೆಯ ಸಿರಸಿ ಮತ್ತು ಮುಂಡಗೋಡ ತಾಲೂಕುಗಳ ಗಡಿ ಹತ್ತು ಕಿ.ಮೀ. ಅಂತರದಲ್ಲಿವೆ. ಪೂರ್ವಕ್ಕೆ ಹಾವೇರಿ, ಬ್ಯಾಡಗಿ ತಾಲೂಕುಗಳು ಉತ್ತರಕ್ಕೆ ಶಿಗ್ಗಾಂವ ತಾಲೂಕು, ದಕ್ಷಿಣಕ್ಕೆ ಸೌಂದರ್ಯ ಸೊಬಗಿಗೆ ಕಾರಣವಾದ ಶಿವಮೊಗ್ಗ ಜಿಲ್ಲೆಯ ಸೊರಬ ಮತ್ತು ಹಿರೇಕೆರೂರು ತಾಲೂಕುಗಳಿವೆ ಈ ಎಲ್ಲಾ ತಾಲೂಕುಗಳ ಮಧ್ಯದಲ್ಲಿರುವುದೇ ಮಲೆನಾಡು

ಸಿರಿಯ ಭತ್ತದ ಕಣಜವೆಂದು ಹೆಸರಾದ ಹಾನಗಲ್ಲು ತಾಲೂಕು. ಹಾವೇರಿ ಜಿಲ್ಲೆಯಿಂದ ೩೭ ಕಿ.ಮೀ. ದೂರದಲ್ಲಿದೆ.

**ಅರಣ್ಯ ಸಂಪತ್ತು:**

ಹಾವೇರಿ ಜಿಲ್ಲೆಯನ್ನು ಅರೆ-ಮಲೆನಾಡು ಪ್ರದೇಶವೆಂದು ಕರೆಯುವುದುಂಟು. ಪಶ್ಚಿಮ ಭಾಗದಲ್ಲಿ ಹರಡಿರುವ ಗುಡ್ಡಗಳು ಉತ್ಕರ್ಶಿತ ಅಗ್ನಿಶಿಲೆ, ಅಲ್ಲಲ್ಲಿ ಜಂಬಿಟ್ಟಿಗೆ ಕಲ್ಲುಗಳಿಂದ ಕೂಡಿವೆ. ದುಂಡಸಿ ಮತ್ತು ಹಾನಗಲ್ಲಿನ ಬಳಿ ಕಡಿದಾದ ಎರಡು ಸಣ್ಣ ಗುಡ್ಡಗಳಿದ್ದು, ಕ್ರಮವಾಗಿ ೭೩೨ ಮೀ. ಮತ್ತು ೮೩೨ ಮೀ. ಎತ್ತರವಾಗಿವೆ. ರಾಣೆಬೆನ್ನೂರ ಹತ್ತಿರದ ಐರಣಿಗುಡ್ಡ, ಬ್ಯಾಡಗಿ ಪೂರ್ವದ ದೇವರಗುಡ್ಡ, ಆಡೂರಿನ ಪೂರ್ವ ಮತ್ತು ಪಶ್ಚಿಮ ಭಾಗ, ಬಾಳಂಬೀಡದಿಂದ ಅಕ್ಕಿ ಆಲೂರುವರೆಗಿನ ಗುಡ್ಡ ಮತ್ತು ಬಂಕಾಪುರದ ಕಿರುಗುಡ್ಡಗಳು ಗಮನ ಸೆಳೆಯುತ್ತವೆ. ಹಾನಗಲ್ಲು ತಾಲೂಕಿನ ಪಶ್ಚಿಮ ಭಾಗ ಕುರುಚಲು ಗುಡ್ಡಗಳಿಂದ ಕೂಡಿದೆ.

**ಬೆಟ್ಟ – ಗುಡ್ಡ :**

ಹಾನಗಲ್ಲು ಪರಿಸರದ ಜನರು, ಹೇಳಿದಂತೆ ಸುಮಾರು ೨೫ ವರ್ಷಗಳ ಹಿಂದೆ ಹಾನಗಲ್ಲು ಪರಿಸರ ಸಂಪತ್ತಿನಿಂದ ತುಂಬಿತ್ತು. ನಿಸರ್ಗ ಸೌಂದರ್ಯ ಕಣ್ಣನ್ನೆ ತಣಿಸುವಂತಿತ್ತು. ಜನರ ಸಂಖ್ಯೆ ಹೆಚ್ಚಳವಾದಂತೆ ಸಾಗುವಳಿ ಅರಣ್ಯ ನಾಶ ಮಾಡಿದ್ದಾರೆ ಎಂದು ತಿಳಿಯುತ್ತದೆ. ಒಟ್ಟಾರೆ ಹಾನಗಲ್ಲ ತಾಲ್ಲೂಕು ೮೩೭೬ ಹೆಕ್ಟೇರ್ ಅರಣ್ಯ ಪ್ರದೇಶ ಹೊಂದಿದ್ದು, ಈಗ ೮೩೬ ಹೆಕ್ಟೇರ್ ಅರಣ್ಯ ಉಳಿದಿದೆ. ಅರಣ್ಯ ಬಯಲು ಪ್ರದೇಶಗಳಲ್ಲಿ ಸಣ್ಣ ಸಣ್ಣ ಗುಡ್ಡದ ಬದುಗಳಲ್ಲಿ ಹೊಸದಾಗಿ ಅರಣ್ಯ ಬಳಸಿದ್ದಾರೆ, ಸುಮಾರು ಎಂಟು ಸಾವಿರ ಎಕರೆಗಳಲ್ಲಿ ನೀಲಗಿರಿ, ಬಿದಿರು, ಹಲಸು ಮುಂತಾದ ಗಿಡಗಳನ್ನು ಬೆಳೆಸಿದ್ದಾರೆ. ಒಂದು ಕಾಲದಲ್ಲಿ ಶ್ರೀಗಂಧ ಮತ್ತು ಸಾಗವಾನಿ ಮರಗಳು ಕರ್ನಾಟಕಕ್ಕೆ ಹೆಸರುವಾಸಿಯಾದ ಕಚ್ಚಾ ಮರ ಮುಟ್ಟುಗಳ ಇದ್ದವು., ಆದರೆ ಇಂದಿಗೂ ಬಹುತೇಕ ನಶಿಸಿ ಹೋಗಿವೆ.[೨]

**ವ್ಯವಸಾಯ:**

ಹಾನಗಲ್ಲು ಪರಿಸರದಲ್ಲಿ ಸಣ್ಣ ಪುಟ್ಟ ಹಳ್ಳಿಗಳೇ ಹೆಚ್ಚು. ವ್ಯವಸಾಯವೇ ಈ ಜನರ ಮುಖ್ಯ ಕಸಬು. ಎಲ್ಲ ಸಂಪತ್ತಿಗೂ ವ್ಯವಸಾಯವೇ ಬಹಳ ಮುಖ್ಯ. ಈ ಪರಿಸರದ ಮುಖ್ಯ ಆಧಾರ ಬೆಳೆಗಳ ಜೊತೆಗೆ ವಾಣಿಜ್ಯ ಬೆಳೆಗಳಾದ ಕಬ್ಬು, ಮೆಣಸಿನಕಾಯಿ, ಶೇಂಗಾ ಕೂಡಾ

ಬೆಳೆಯುತ್ತಾರೆ. ಈ ಪರಿಸರದಲ್ಲಿ ಪೂರ್ಣ ಕೆಂಪು ಮಿಶ್ರಿತ ಮಸಾರಿ ಭೂಮಿಯೇ ಹೆಚ್ಚಾಗಿದೆ. ಒಟ್ಟು ಕ್ಷೇತ್ರ ೫೭.೫೨೦ ಹೆಕ್ಟೇರಗಳು ಇದೆ.

**ಜಲ ಸಂಪನ್ಮೂಲ:**

ಈ ಜಿಲ್ಲೆಯ ನದಿ ಕೆರೆ ಹಾಗೂ ಸಣ್ಣ ಪುಟ್ಟ ಹಳ್ಳಗಳೇ ಜಲಸಂಪನ್ಮೂಲಗಳಾಗಿವೆ. ತುಂಗಭದ್ರಾ ವರದಾ ಧರ್ಮಾ ನದಿಗಳು ಬಯಲು ಪ್ರದೇಶಗಳಲ್ಲಿ ವಾಸ ಮಾಡುವ ಜನರ ಬದುಕಿನ ಮೇಲೆ ಮಹತ್ತರ ಪ್ರಭಾವ ಬೀರಿವೆ. ಮುಖ್ಯವಾಗಿ ಹಾನಗಲ್ಲು ಪರಿಸರಕ್ಕೆ ಸಂಬಂಧಿಸಿದಂತೆ ವರದಾನದಿ ಮತ್ತು ಧರ್ಮಾ ನದಿಗಳು ಮುಖ್ಯವಾಗಿ ಜೀವನಾಡಿಗಳು. ಕೆಲವು ಕೆರೆಗಳು ಈ ನದಿಯ ನೀರಿನ ಹರಿವೇ ಮುಖ್ಯವಾಗಿ ನಮಗೆ ಕಂಡುಬರುತ್ತದೆ.

**ವರದಾ ನದಿ:**

ಇದು ಪ್ರಾಚೀನ ಮೈಸೂರು ಸೀಮೆಯಲ್ಲಿ ಇಕ್ಕೇರಿಯ ಹತ್ತಿರ ಉಗಮವಾಗಿ ಶಿವಮೊಗ್ಗ ಜಿಲ್ಲೆಯಿಂದ ಹಾನಗಲ್ಲು ತಾಲೂಕಿನ ಗೊಂದಿ ಮುಖಾಂತರ ಪ್ರವೇಶ ಮಾಡಿ ಬಂಕಣ ಹತ್ತಿರ ಹಾಯ್ದು ಆಡೂರು ಹತ್ತಿರ ವರ್ದಿಯಿಂದ ಪೂರ್ವಕ್ಕೆ ಹರಿದು ಉತ್ತರಕ್ಕೆ ಕೂಡಲ ಹತ್ತಿರ ಧರ್ಮಾನದಿಯನ್ನು ಸೇರುತ್ತದೆ. ಹಾನಗಲ್ಲು ತಾಲ್ಲೂಕನ್ನು ಸಮಾನವಾಗಿ ಇಬ್ಭಾಗ ಮಾಡುವ ಈ ನದಿ ೬೦೮ ಮೀ ದೂರದವರೆಗೆ ಹರಿದಿದೆ. ಕೂಡಲ ಹತ್ತಿರ ಧರ್ಮಾನದಿಗೆ ಸಂಗಮವಾಗಿದೆ. ಗೊಂದಿ ಬಂಕಣ ಸಂಗೂರ ಹತ್ತಿರ ಸಾರಿಗೆ ವ್ಯವಸ್ಥೆಗೆ ಮೂರು ದೊಡ್ಡ ಸೇತುವೆಗಳನ್ನು ಹಾಕಲಾಗಿದೆ. ಕುಸುನೂರು, ವಾಸನ, ಶೇಷಗಿರಿ, ಬಂಕಣ ಹತ್ತಿರ ಈ ನದಿಗೆ ರೈತನ ಅನುಕೂಲತೆ ಸರಕಾರವೇ ನಿಂತು ನೀರಾವರಿ ಯೋಜನೆಗಳನ್ನು ಮಾಡಿಕೊಟ್ಟಿದೆ.

**ಧರ್ಮಾನದಿ :**

ಉತ್ತರ ಕನ್ನಡ ಜಿಲ್ಲೆಯ ಶಿರಸಿ ಹತ್ತಿರ ಈ ಸಳಾರು ಕೆರೆಯ ಸಮೀಪ ಜವಳು ತಗ್ಗು ಪ್ರದೇಶದಲ್ಲಿ ಜನಿಸಿದ ಧರ್ಮಾನದಿ ಸಣ್ಣ ಹಳ್ಳದಷ್ಟು ಹರಿದರೂ ಹಾನಗಲ್ಲು ಪರಿಸರದಲ್ಲಿ ೧೦–೧೫ ಕಿ.ಮೀ.ಗಳ ಅಂತರದಲ್ಲಿ ಶೃಂಗೇರಿ ಹತ್ತಿರ ಹಾನಗಲ್ಲು ಪರಿಸರವನ್ನು ಪ್ರವೇಶಿಸುತ್ತದೆ. ಈ ನದಿಯ ಕಾಲುವೆ ಯಲ್ಲಾಪುರ ಬಳಿ ತಿರುವನು ತೆಗೆದುಕೊಂಡು ಮುಂದೆ ಹೊಂಬಳ ಮಾರ್ಗವಾಗಿ ಕೂಡಲ ಹತ್ತಿರ ವರದಾನದಿಯನ್ನು ಸೇರುತ್ತದೆ. ಧರ್ಮಾ ಮತ್ತು ವರದಾ ನದಿಗಳು ಕೂಡುವದರಿಂದ ಕೂಡಲ ಎಂಬ ಹೆಸರು ಬಂದಿರಬೇಕು, ಇಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಕೂಡಲ ಸಂಗಮೇಶ್ವರ ದೇವಾಲಯವಿದ್ದು ಮಕರ ಸಂಕ್ರಾಂತಿ ದಿನ ೨ ದಿನಗಳ ಕಾಲ ಜಾತ್ರೆ

ಸೇರುತ್ತದೆ. ಇಲ್ಲಿ ೨೫ ಸಾವಿರ ಜನಗಳು ಸೇರುತ್ತಾರೆ. ಈ ಜಾತ್ರೆಯು ಇಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿದೆ

**ನೀರಾವರಿ ಯೋಜನೆ :**

ಧರ್ಮಾನದಿ ಮತ್ತು ವರದಾ ನದಿ ಈ ಪರಿಸರದ ಜೀವನದಿಯೆಂದರೆ ತಪ್ಪಾಗಲಾರದು. ಆದ್ದರಿಂದ ಈ ಪರಿಸರದಲ್ಲಿ ನೀರಾವರಿ ಯೋಜನೆಯನ್ನು ಬ್ರಿಟಿಷ್ ಸರಕಾರದಿಂದ ಈಗಿನವರೆಗೆ ಅನುಷ್ಠಾನಗೊಳಿಸಿ ಅದನ್ನು ನಿರ್ವಹಣೆ ಮಾಡುತ್ತಾ ಬಂದಿದ್ದಾರೆ. ಧರ್ಮಾನದಿಯು ಸುಮಾರು ೪೫ ಕಿ.ಮೀ. ದೂರ ಹರಿಯುತ್ತದೆ. ಬ್ರಿಟಿಷ್ ಸರಕಾರವಿದ್ದಾಗ ಈ ನದಿಗೆ ಹಾನಗಲ್ಲ ಹತ್ತಿರ ಸೇತುವೆ ಕಟ್ಟಿದ್ದಾರೆ. ಹೊಸದಾಗಿ ೧೫ ವರ್ಷಗಳ ಹಿಂದೆ ಅಕ್ಕಿವಳ್ಳಿ, ಕಾಡಶಿಟ್ಟೆಯಳ್ಳಿ ಕಂಚಿನಗಳಾಗಿ ಹತ್ತಿರ ಮೂರು ಸೇತುವೆಗಳನ್ನು ನಿರ್ಮಿಸಲಾಗಿದೆ. ಇದರಿಂದ ಗ್ರಾಮೀಣ ಜನರಿಗೆ ತುಂಬಾ ಅನುಕೂಲವಾಗಿದೆ.

ಧರ್ಮಾನದಿಗೆ ಹಾನಗಲ್ಲಿನ ಉತ್ತರಕ್ಕೆ ಶೃಂಗೇರಿ ಬಳಿ ಕವೆಕಟ್ಟಿ ಕಾಲುನಹಳ್ಳಿ ಮತ್ತು ಧರ್ಮಾನದಿಗೆ ೪೦೦ ವರ್ಷಗಳ ಹಿಂದೆಯೆ ಕಾಲುವೆಯನ್ನು ಕಟ್ಟಲಾಗಿದೆ. ೧೯೨೧-೨೨ ಮುಂಬಯಿ ಸರಕಾರ ಕಾಲುವೆಯನ್ನು ದುರಸ್ತೆ ಮಾಡಲಾಯಿತು. ನಂತರ ಇದೇ ಸರ್ಕಾರವು ಮುಂಡಗೋಡ ತಾಲೂಕ ಮಳಗಿ ಸಮೀಪ ಧರ್ಮಾನದಿಗೆ ಒಡ್ಡು ಕಟ್ಟಿಸಿದ ನಂತರ ಧರ್ಮಾ ಯೋಜನೆ ಎಂದು ಪ್ರಸಿದ್ಧಿ ಪಡೆದಿದೆ. ೧೯೫೨-೫೬ ಆಗಿನ ವಿಧಾನಪರಿಷತ್ತಿನ ಸದಸ್ಯರಾಗಿದ್ದ ನರಸಿಂಗರಾವ್ ದೇಸಾಯಿ ಹಾಗೂ ಶಾಸಕರಾದ ಸಿಂಧೂರ ಸಿದ್ದಪ್ಪನವರ ಶ್ರಮದಿಂದ ಈ ಯೋಜನೆಗಳು ಅಸ್ತಿತ್ವಕ್ಕೆ ಬಂದಿವೆ.

ಹಾನಗಲ್ಲು ಪರಿಸರದ ಒಂದು ಕಾಲುವೆ ೧೬ ಮೈಲಿ ಹರಿದು ೨೬ ಕ್ಕಿಂತ ಹೆಚ್ಚು ಕೆರೆಗಳಿಗೆ ನೀರು ಪೂರೈಸುವುದಲ್ಲದೆ ಎಡ ಮತ್ತು ಬಲಗಳಲ್ಲಿ ಭತ್ತದ ಗದ್ದೆಗೆ, ಕಬ್ಬಿನ ಗದ್ದೆಗೆ, ಅಡಿಕೆ ತೋಟಗಳಿಗೆ ನೀರು ಉಣಿಸುತ್ತಿದೆ. ಈ ನೀರಿನಿಂದ ಹಾನಗಲ್ಲು ಪರಿಸರವು ಭತ್ತದ ಕಣಜವೆಂದು ಖ್ಯಾತಿಯನ್ನು ಪಡೆದಿದೆ.

**ಜನಸಂಖ್ಯೆ:**

ಹಾನಗಲ್ಲು ತಾಲೂಕಿನ ಜನಸಂಖ್ಯೆ ೨೦೧೧-೧೨ರ ಜನಗಣತಿಯ ಪ್ರಕಾರ ೨.೬೦.೪೫೫ ಇದ್ದು ಇದರಲ್ಲಿ ಪುರುಷ ೧೩೩೧೭೧ ಮತ್ತು ಮಹಿಳೆಯರ ೧೨೭೨೮೪ ರಷ್ಟು ಇರುವರು. ಪ್ರತಿ

ಸಾವಿರ ಪುರುಷರಿಗೆ ಮಹಿಳೆಯರ ಪ್ರಮಾಣ ೯೫೬ರಷ್ಟಿದೆ. ಮತ್ತು ಜನಸಾಂದ್ರತೆಯು ಪ್ರತಿ ಚ.ಕಿ.ಗೆ. ೭೭೦ ಕಂಡು ಬರುತ್ತದೆ.[೩]

**ಜನವರ್ಗಗಳು:**

ಹಾನಗಲ್ಲು ಪರಿಸರದಲ್ಲಿ ಹಲವಾರು ಜನವರ್ಗದವರು ವಾಸಿಸುತ್ತಾರೆ. ವೀರಶೈವರು, ಬ್ರಾಹ್ಮಣರು, ಅಂಬಿಗರು, ಕುರುಬರು, ಲಂಬಾಣಿಗಳು, ಜೈನರು, ಮುಸ್ಲಿಂರು ವಾಸಿಸುತ್ತಾರೆ. ವಿವಿಧ ವೃತ್ತಿಯನ್ನು ಅವಲಂಬಿಸಿದ್ದಾರೆ. ಅಲ್ಪಸಂಖ್ಯಾತ ಜನಾಂಗದವರೂ ಇಲ್ಲಿ ವಾಸಿಸುತ್ತಾರೆ. ಉದಾ: ವಿಶ್ವಕರ್ಮ, ಸಿಂಪಿಗ ಮರಾಠರು ಮುಂತಾದವರು. ಸಾಮಾನ್ಯವಾಗಿ ಬ್ರಾಹ್ಮಣರು ಮತ್ತು ಲಿಂಗಾಯತರು ಶೆಟ್ಟರನ್ನು ಹೊರತುಪಡಿಸಿ ಉಳಿದ ಜನಾಂಗ ಮಾಂಸಾಹಾರಿಗಳಾಗಿದ್ದು, ಅವರಲ್ಲಿನ ಕೆಲವರು ಸರ್ಕಾರಿ ಕೆಲಸಗಳಲ್ಲಿ ಮತ್ತು ಕೂಲಿ ಕೆಲಸದಲ್ಲಿ ತೊಡಗಿದ್ದಾರೆ. ಇವರು ಆರ್ಥಿಕವಾಗಿ ತುಂಬಾ ಹಿಂದುಳಿದವರಾಗಿದ್ದರಿಂದ ಸರ್ಕಾರ ಇವರಿಗೆ ಮನೆ ನಿರ್ಮಿಸಿಕೊಟ್ಟಿದೆ. ಇವರು ವ್ಯವಸಾಯವನ್ನು ಅವಲಂಬಿಸಿದ್ದಾರೆ. ಇತ್ತೀಚಿನ ಜಾಗತೀಕರಣ ಪ್ರಭಾವದಿಂದ ಇಲ್ಲಿಯ ಕೆಲವು ಜನಾಂಗ ಮಂಗಳೂರು, ಬೆಂಗಳೂರು, ಮುಂಬೈವರೆಗೆ ದುಡಿಯಲು ಹೋಗಿದ್ದಾರೆ.

**ಹಾನಗಲ್ಲು ತಾಲೂಕಿನ ಅಂಕಿ ಅಂಶ:**

| ಕ್ರ.ಸಂ | | |
|---|---|---|
| ೦೧ | ನಾಡ ಕಚೇರಿ | ೨ |
| ೦೨ | ಗ್ರಾಮ ಲೆಕ್ಕಿಗಳ ವೃತ್ತ | ೬೦ |
| ೦೩ | ಹೋಬಳಿಗಳು | ೦೩ |
| ೦೪ | ಗ್ರಾಮ ಪಂಚಾಯತಗಳು | ೪೪ |
| ೦೫ | ನಗರಗಳು | ೦೧ |
| ೦೬ | ಜನವಸತಿ ಇರುವ ಪ್ರದೇಶಗಳು | ೧೫೪ |
| ೦೭ | ಜನವಸತಿ ಇಲ್ಲದ ಪ್ರದೇಶಗಳು | ೦೧ |
| ೦೮ | ಸ್ಥಳಿಯ ಸಂಸ್ಥೇಗಳು | ೦೩ |
| ೦೯ | ಶಹರ ಪಂಚಾಯತ | ೦೨ |

| | | |
|---|---|---|
| ೧೦ | ಚಿತ್ರಮಂದಿರಗಳು | ೦೨ |
| ೧೧ | ಪೋಲಿಸ್ ಠಾಣೆಗಳು | ೦೨ |
| ೧೨ | ಅಗ್ನಿಶಾಮಕ ಠಾಣೆ | ೦೧ |
| ೧೩ | ಪಡಿತರ ಅಂಗಡಿಗಳು | ೬೪ |

**ಹವಾಗುಣ ಮತ್ತು ಮಳೆ:**

ಇಲ್ಲಿನ ಹವಾಗುಣ ಉತ್ತಮವಾಗಿದ್ದು, ಇಲ್ಲಿಯ ಸಮಶೀತೋಷ್ಣ ಹವಾಗುಣ ಹೊಂದಿದೆ. ಹಾನಗಲ್ಲು ಪರಿಸರ ಸಮುದ್ರಮಟ್ಟದಿಂದ ಸುಮಾರು. ೬೦೦ ಮೀಟರ ಎತ್ತರವಿದೆ. ವರ್ಷದಲ್ಲಿ ಮಳೆ ಪ್ರಮಾಣ ೧೨೩೩.೬ ಮಿ.ಮೀ. ಹೊಂದಿದೆ. ತಾಲೂಕಿನಲ್ಲಿ ಒಟ್ಟು ೫ ಮಳೆ ಮಾಪನ ಕೇಂದ್ರಗಳಿವೆ.

**ರಾಜಕೀಯ ಇತಿಹಾಸ:**

**ಪ್ರಾಗಿತಿಹಾಸ :**

ಕರ್ನಾಟಕದಲ್ಲಿ ಚಾರಿತ್ರಕವಾಗಿ ಮಹತ್ವ ಪಡೆದ ಸ್ಥಳಗಳಲ್ಲಿ ಹಾನಗಲ್ಲೂ ಒಂದು. ನೀರಿನ ಸರಬರಾಜು, ದಟ್ಟವಾದ ಕಾಡು-ಬೆಟ್ಟ ಮೊದಲಾದ ಭೌಗೋಳಿಕ ಲಕ್ಷಣಗಳನ್ನು ಹೊಂದಿದ್ದರಿಂದ, ಈ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ಚಟುವಟಿಕೆಗಳು ನಡೆದುಬಂದಿವೆ.

ಹಾನಗಲ್ಲು ಮತ್ತು ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಮಾನವನು ಬಳಸಿದ ಅವಶೇಷಗಳಿಂದ ಹಳೆ ಶಿಲಾಯುಗ, ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ, ಶಿಲಾ ತಾಮ್ರಯುಗ, ಕಬ್ಬಿಣ - ಬೃಹತ್ ಶಿಲಾಯುಗ ಮತ್ತು ಇತಿಹಾಸ ಕಾಲದ ನೆಲೆಗಳನ್ನು ಗುರುತಿಸಬಹುದು.[೫]

**ಆದಿ ಹಳೆ ಶಿಲಾಯುಗ :**

ದಕ್ಷಿಣ ಭಾರತದಲ್ಲಿ ಹಳೆ ಶಿಲಾಯುಗದ ನಿವೇಶನಗಳು ತಮಿಳುನಾಡು, ಕರ್ನಾಟಕ, ಮಹಾರಾಷ್ಟ್ರಗಳ ವಿವಿಧ ಭಾಗಗಳಲ್ಲಿ ಕಂಡು ಬಂದಿವೆ. ಈ ಕಾಲದ ನೆಲೆಗಳನ್ನು ಪತ್ತೆ ಹಚ್ಚುವಲ್ಲಿ ಪ್ರಮುಖನಾಗಿದ್ದ ರಾಬರ್ಟ ಬ್ರೂಸ್‌ಫ್ರೂಟ್, ಹಾವೇರಿ ಜಿಲ್ಲೆಯ ರಾಣೆಬೆನ್ನೂರು, ಬ್ಯಾಡಿ, ಹಿರೇಕೆರೂರು ತಾಲೂಕುಗಳ ಹಳ್ಳಿಗಳಲ್ಲಿ ಸರ್ವೇಕ್ಷಣ ಮಾಡಿ ಅನೇಕ ಪ್ರಾಚೀನ ನೆಲೆಗಳನ್ನು

ಗುರುತಿಸಿದ್ದಾನೆ. ಸಾಮಾನ್ಯವಾಗಿ ಹಳೆ ಶಿಲಾಯುಗವನ್ನು ಬೆಳವಣಿಗೆಯ ಆಧಾರದ ಮೇಲೆ ಮೂರು ಹಂತಗಳಲ್ಲಿ ವಿಂಗಡಿಸಿ ಆದಿ, ಮಧ್ಯ, ಅಂತ್ಯ ಹಳೆ ಶಿಲಾಯುಗಗಳೆಂದು ಕರೆಯಲಾಗಿದೆ.

ಹಾನಗಲ್ಲು ಪ್ರದೇಶದಲ್ಲಿ ಆದಿ ಹಳೆ ಶಿಲಯುಗಗದ ೮ ನೆಲೆಗಳು, ವರ್ದಿ (ಹಾನಗಲ್ಲು ತಾ.), ಬೆಣ್ಣೆಹಳ್ಳ (ಬ್ಯಾಡಗಿ ತಾ.), ಚೆನ್ನಾಪರು (ಸವಣೂರು ತಾ.) ನದಿಹರಳಹಳ್ಳಿ, ನಲವಾಗಲ (ರಾಣೆಬೆನ್ನೂರ ತಾ.) ಮತ್ತು ಮಧ್ಯಶಿಲಾಯುಗದ ನೆಲೆಗಳನ್ನು ತೋಟಗಂಟೆ, ರಟ್ಟೆಹಳ್ಳಿ (ಹಿರೇಕೆರೂರು ತಾ.) ಗಳಲ್ಲಿ ಗುರುತಿಸಲಾಗಿದೆ.

ಕರ್ನಾಟಕದ ವಿವಿಧೆಡೆಗಳಲ್ಲಿ ಪತ್ತೆಯಾದ (ಹಲಸಗಿ ಗುಲಬಗಾ ಜಿ. ಕಿಬ್ಬನಹಳ್ಳಿ ತುಮಕೂರು ಜಿ. ನ್ಯಾಮತಿ ಶಿವಮೊಗ್ಗ ಜಿ.) ರೋಸ್ಟ್ರೋಕ್ಯಾರಿನೇಟ ಎಂಬ ಹಳೆಯದಾದ ಆಯುಧಗಳು, ಅಬ್ಬವಿಲಿಯನ್ ಮತ್ತು ಮುಂದುವರೆದ ಅಶೂಲಿಯನ್ ಮಾದರಿಯ ಆಯುಧಗಳು, ಕ್ಲಾಕಟನ್ ರೀತಿಯ ಚೆಕ್ಕೆಗಳಲ್ಲಿ ತಯಾರಿಸಿದ ಉಪಕರಣಗಳು ಹಾನಗಲ್ಲು ಪ್ರದೇಶದ ವರ್ದಿಯಲ್ಲಿಸಿಕ್ಕಿವೆ.

ತೋಟಗಂಟಿ, ರಟ್ಟೆಹಳ್ಳಿಗಳಲ್ಲಿ ದೊರೆತ ಶಿಲಾಯುಧಗಳು ಚೆರ್ಟ ಮತ್ತು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿತವಾಗಿವೆ. ನದಿಹರಳಿಹಳ್ಳಿ, ನಲವಾಗಲು, ಚಲ್ಲಾಪುರ ಮತ್ತು ಚೆನ್ನಿನದಿ ನೆಲೆಗಳಲ್ಲಿ ದೊರೆತ ಉಪಕರಣಗಳು ಯಾವುದೇ ನಿರ್ದಿಷ್ಟ ಸ್ವರೂಪಗಳನ್ನು ಹೊಂದಿಲ್ಲ. ಆದರೆ ಚೆನ್ನಾಪುರದ ಉಪಕರಣಗಳು ಅಶೂಲಿಯನ್ ಮಾದರಿಯನ್ನು ಹೋಲುತ್ತವೆ. ಈ ಕಾಲದಲ್ಲಿ ಆಯುಧಗಳ ಲಕ್ಷಣಗಳಿಂದ ಮತ್ತು ಕಾಲಮಾನದಿಂದ ಪ್ರತ್ಯೇಕಿಸಿ ಅಧ್ಯಯನಿಸಬಹುದಾದ ಮಾನವನ ಜೀವನದ ಕ್ರಮವು ಕಠಿಣವಾಗಿತ್ತು. ಕಿರುಗುಡ್ಡ- ಬೆಟ್ಟಗಳಿಂದ ಮತ್ತು ಧರ್ಮಾ, ವರದಾ, ಕುಮದ್ವತಿ, ತುಂಗಭದ್ರ ನದಿಗಳಿಂದ ಆವೃತವಾದ ಈ ಪ್ರದೇಶದಲ್ಲಿ ಮಾನವ ತನ್ನ ಆಹಾರಕ್ಕಾಗಿ ಬೇಟೆಯಾಡುತ್ತ, ಸ್ಥಳದಿಂದ ಸ್ಥಳಕ್ಕೆ ಸಂಚಾರ ಮಾಡುವ ಜೀವನ ಕ್ರಮವಾಗಿತ್ತೆಂದು ಹೇಳಬಹುದು.[೬]

**ಸೂಕ್ಷ್ಮ ಶಿಲಾಯುಗ :**

ಈ ಯುಗಕ್ಕೆ ಸೇರಿದ ೬ ನೆಲೆಗಳು ಜಿಲ್ಲೆಯಾದ್ಯಂತ ಕಂಡುಬಂದರೆ, ಮುಖ್ಯವಾಗಿ ೩ ನೆಲೆಗಳು (ಅರೇಕೊಪ್ಪ, ಗಿರಿಸನಕೊಪ್ಪ, ಹಾನಗಲ್ಲು) ಹಾನಗಲ್ಲು ತಾಲೂಕಿನಲ್ಲಿವೆ. ಆಯುಧಗಳ ನಿರ್ಮಾಣದಲ್ಲಿ ಸೂಕ್ಷ್ಮ ತಂತ್ರಗಾರಿಕೆ ಮತ್ತು ಸಂಕೀರ್ಣತೆಗೆ ಹೆಸರಾದ ಈ ಯುಗಕ್ಕೆ ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಆಯುಧಗಳ ತಯಾರಿಕೆಗಾಗಿ ಕ್ವಾರ್ಟ್ಸ್, ಕ್ಯಾಲ್ಸಿಡೋನಿ,

ಹರಳುಗಲ್ಲು, ಹಾಲುಗಲ್ಲುಗಳನ್ನು ಬಳಸಿಕೊಳ್ಳಲಾಗಿದೆ. ಹಾನಗಲ್ಲು ಕೋಟೆಯ ಒಳಭಾಗದ ಗದ್ದೆಗಳಲ್ಲಿ ಈ ಯುಗಕ್ಕೆ ಸೇರಿದ ಶಿಲಾ ಉಪಕರಣಗಳಾದ ನೀಳಚಕ್ಕೆ, ಮೊನೆ, ಕೊರೆಯುಳಿ, ಮೊನೆ ಮಾದರಿ ಡಬ್ಬಣ, ಅರ್ಧಚಂದ್ರಾಕೃತಿಯ ಉಪಕರಣಗಳು ಹರಡಿವೆ.[೭]

**ನೂತನ ಶಿಲಾಯುಗ :**

ದಖನ್ ಪ್ರಸ್ಥಭೂಮಿ ನವಶಿಲಾಯುಗದ ನಿವೇಶನಗಳಿಗೆ ಹೆಸರಾಗಿದೆ. ಅದರಲ್ಲೂ ಕರ್ನಾಟಕದ ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ಪ್ರದೇಶವು ನವಶಿಲಾಯುಗದ ತವರುಮನೆಯಾಗಿದೆ. ಹಾವೇರಿ ಜಿಲ್ಲೆಯಲ್ಲಿ ಒಟ್ಟು ೫ ನೂತನ ಶಿಲಾಯುಗದ ನೆಲೆಗಳಿವೆ. (ಮುದೇನೂರ, ಹಾದರಗೇರಿ, ರಾಣೆಬೆನ್ನೂರು, ಪುರದಕೇರಿ, ಶಿಗಂಟೆ, ಹಳ್ಳೂರು ಹಿರೇಕೆರೂರು ತಾ.) ಹಾನಗಲ್ಲು ನಗರಕ್ಕೆ ಹೊಂದಿಕೊಂಡಿರುವ ಕೋಟೆಯ ಅವಶೇಷದ ಒಳಪ್ರದೇಶದಲ್ಲಿ ನವಶಿಲಾಯುಗದ ಬೂದು ಬಣ್ಣದ ಮಡಿಕೆಯ ಅವಶೇಷಗಳು ದೊರೆತಿವೆ.

ನವಶಿಲಾಯುಗದ ಆಕರ್ಷಕವಾದ ಹಂತ ಕಂಡುಬರಲು ಇಲ್ಲಿ ದೊರೆಯುವ ಬೆಸಾಲ್ಟ್, ಡೊಲರೈಟ್, ಡೆಕ್ಕನ್‌ಟ್ರ್ಯಾಪ್ ಶಿಲೆಗಳು ನಯವಾದ ಕಣಗಳಿಂದ ಕೂಡಿದ್ದರಿಂದ ಉಜ್ಜಿ ನಯಗೊಳಿಸಿ ಮೆರಗು ಕೊಟ್ಟು ಶಿಲಾಯುಧಗಳನ್ನು ತಯಾರಿಸಲು ಅನುಕೂಲವಾಗಿತ್ತು. ಈ ಯುಗದ ಉಪಕರಣಗಳಲ್ಲಿ ಕೊಡಲಿ, ಬಾಚಿ, ಉಳಿ, ಅರೆಯುವ ಕಲ್ಲು, ಕವಣೆಕಲ್ಲು ಹಾಗೂ ಮೂಳೆಗಳಲ್ಲಿ ಮಾಡಿದ ಕೊರೆಯುವ, ಸೀಳುವ ಮತ್ತು ಡಬ್ಬಣದಂತಹ ಆಯುಧಗಳನ್ನು ಉಪಯೋಗಿಸಲಾಗುತ್ತಿತ್ತು.

ಈ ಯುಗದಲ್ಲಿ ಕುಂಬಾರಿಕೆ, ಪಶುಸಂಗೋಪನೆ, ಬೇಟೆ, ಮೀನುಗಾರಿಕೆ, ಕೃಷಿ ಉದ್ಯೋಗಗಳು ಪ್ರಮುಖವಾಗಿದ್ದವು. ಅಲ್ಲದೆ ಮಾನವನು ಒಂದೇ ಸ್ಥಳದಲ್ಲಿ ನೆಲೆನಿಂತು ಸಾಂಘಿಕ ಜೀವನವನ್ನು ಆರಂಭಿಸಿದನು.[೮]

ಹಾನಗಲ್ಲು ನಗರ ಮತ್ತು ಸುತ್ತಲಿನ ಪ್ರದೇಶದಲ್ಲಿ ಈ ಕಾಲದ ನಿಚ್ಚಳ ಲಕ್ಷಣಗಳು ಕಾಣುತ್ತವೆ. ಮುದೇನೂರಿನಲ್ಲಿ ಉಜ್ಜಿ ನಯಗೊಳಿಸಿದ ಕೊಡಲಿ, ಕಂದು ಬಣ್ಣದ ಮಡಿಕೆ, ಹಾದರಗೇರಿ, ಗಳಗನಾಥ, ಪುರದಕೇರಿ, ಶಿರಗಂಟೆ, ಹಳ್ಳೂರುಗಳಲ್ಲಿ ಬ್ರಹ್ಮಗಿರಿ ಮಾದರಿಯ ಕಂದು ಬಣ್ಣ ಮತ್ತು ಕೆಂಪು ಬಣ್ಣದ ಚಿತ್ರಿತ ಮಡಿಕೆಗಳು ಕಂಡುಬಂದಿವೆ. ಈ ಯುಗದ ಕೃಷಿಯಲ್ಲಿ ರಾಗಿ ಪ್ರಮುಖ ಬೆಳೆಯಾಗಿತ್ತೆಂದು, ಹತ್ತಿರದ ಹಳ್ಳೂರು ಉತ್ಖನನದಲ್ಲಿ ದೊರೆತ ರಾಗಿ

ಕಾಳುಗಳ ಅವಶೇಷದಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ಇಂದಿಗೂ ರಾಗಿ, ಈ ಭಾಗದ ಪ್ರಮುಖ ಬೆಳೆಯಾಗಿರುವುದನ್ನು ಕಾಣಬಹುದು.

**ಶಿಲಾ – ತಾಮ್ರಯುಗ :**

ನೂತನ ಶಿಲಾಯುಗದ ಮುಂದಿನ ಹಂತ ಶಿಲಾ –ತಾಮ್ರಯುಗ. ಈ ಯುಗಕ್ಕೆ ಸೇರಿದ ನೆಲೆಗಳಲ್ಲಿ ಪ್ರಮುಖವೆಂದು ಗುರುತಿಸಿಕೊಂಡಿರುವ ಬ್ರಹ್ಮಗಿರಿ ಮತ್ತು ಸಂಗನಕಲ್ಲುಗಳನ್ನು ಉದಾಹರಿಸಬಹುದು. ಹಾವೇರಿ ಜಿಲ್ಲೆಯಲ್ಲಿ ಒಟ್ಟು ೧೬ ನೆಲೆಗಳಿವೆ. ಅವುಗಳಲ್ಲಿ ಹಾನಗಲ್ಲು ಪರಿಸರದ ಹಾದರಗೇರಿ, ನದಿಹರಳಹಳ್ಳಿ, ಆಸುಂಡಿ, ಕೂನಬೇವು, ನಲವಾಗಲ(ರಾಣೆಬೆನ್ನೂರು ತಾ.) ತಳ್ಳಿಹಳ್ಳಿ ನಲ್ಲಾಪುರ(ಸವಣೂರ ತಾ.) ಕದರಮಂಡಲಗಿ(ಬ್ಯಾಡಗಿ ತಾ.)ಗಳಲ್ಲಿ ಈ ಯುಗದ ನೆಲೆಗಳನ್ನು ಹೆಸರಿಸಬಹುದು.

ಮಡಿಕೆಗಳ ತಯಾರಿಕೆಯ ತಾಂತ್ರಿಕತೆಯಲ್ಲಿ ಬಳಸಿದ ಬಣ್ಣಗಾರಿಕೆ ಹಾಗೂ ಆಯುಧಗಳನ್ನು ಉಜ್ಜಿ ನಯಗೊಳಿಸುವ ನಯಗಾರಿಕೆಗಳು ಈ ಕಾಲದ ವಿಶೇಷಗಳು ಜೋರ್ವೆ ಮತ್ತು ಬ್ರಹ್ಮಗಿರಿಯ ಮಾದರಿಯ ದಪ್ಪ, ಒರಟಾದ ಕಂದು ಬಣ್ಣದ ಪಾತ್ರಾವಶೇಷಗಳು ಕವಲೆತ್ತು, ನದಿಹರಳಹಳ್ಳಿ, ನಲವಾಗಲಗಳಲ್ಲಿ ದೊರೆತಿವೆ. ಕಪ್ಪು ವರ್ಣದಲ್ಲಿ ಚಿತ್ರಿಸಿದ ಕೆಂಪು ಬಣ್ಣದ ಮಡಿಕೆ, ಇಬ್ಬದಿ ನೀಳ ಚಕ್ಕೆ ಹಾಗೂ ನಯಗೊಳಿಸಿರುವ ಕೈಗೊಡಲಿಗಳು ಈ ಕಾಲಕ್ಕೆ ಸೇರಿದವು.[೬]

**ಕಬ್ಬಿಣ – ಬೃಹತ್ ಶಿಲಾಯುಗ :**

ಕರ್ನಾಟಕದಲ್ಲಿ ಕಬ್ಬಿಣ – ಬೃಹತ್ ಶಿಲಾಯುಗದ ಅವಶೇಷಗಳು ಬಳ್ಳಾರಿ, ರಾಯಚೂರು, ಕೊಪ್ಪಳ ಜಿಲ್ಲೆಗಳಲ್ಲಿ ಹೇರಳವಾಗಿ ಹರಡಿವೆ. ಹಾವೇರಿ ಜಿಲ್ಲೆಯಾದ್ಯಂತ ಈ ಯುಗದ ನೆಲೆಗಳು ಅಲ್ಲಲ್ಲಿ ಕಾಣುತ್ತವೆ. ಕಬ್ಬಿಣ ತಯಾರಿಸುವ ತಂತ್ರಗಾರಿಕೆ, ಅದರಿಂದ ಉಪಕರಣಗಳ ತಯಾರಿಕೆ, ದೊಡ್ಡ ದೊಡ್ಡ ಶಿಲಾಬಂಡೆಗಳನ್ನು ಬಳಸಿ ಶಿಲಾವೃತ್ತ, ಕಲ್ಮನೆ, ನಿಲಿಸುಗಲ್ಲುಗಳ ಸಮಾಧಿಗಳ ನಿರ್ಮಾಣ ಹಾಗೂ ಕಪ್ಪು–ಕೆಂಪು, ಚಿತ್ರಿತ ಮಡಿಕೆ, ಮೃತಪಾತ್ರೆ, ವರ್ಣಚಿತ್ರ ಮೊದಲಾದವು ಈ ಕಾಲದ ಪ್ರಮುಖ ಲಕ್ಷಣಗಳು. ಈ ಲ್ಲೆಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ೧೧ ನೆಲೆಗಳಿವೆ. ಹಾನಗಲ್ಲು ತಾಲೂಕಿನ ಕೆರನಾಡಿನಲ್ಲಿ ಶಿಲಾಸಮಾಧಿ ಮತ್ತು ಅವಶೇಷಗಳು ಕಂಡುಬಂದಿವೆ. ಅಲ್ಲದೇ ಹತ್ತಿರದಲ್ಲಿರುವ ತಡಕನಹಳ್ಳಿ(ಹಿರೇಕೆರೂರು ತಾ.) ಹಾಗೂ ಸ್ವಲ್ಪ ದೂರದ ಕೋಮರನಹಳ್ಳಿ(ಮಲೆಣ್ಣೂರು ತಾ.) ಗಳ ಉತ್ಖನನದಲ್ಲಿ ದೊರೆತ ಅವಶೇಷಗಳಿಂದ ಬೃಹತ್ ಶಿಲಾಯುಗದ ಜನರು ಉತ್ತಮ ಕಬ್ಬಿಣ ತಯಾರಿಸುವ

ತಂತ್ರಗಾರಿಕೆಯನ್ನು ಬಲ್ಲವರಾಗಿದ್ದರೆಂದು ತಿಳಿದುಬಂದಿದೆ. ಇವುಗಳೆಲ್ಲವುಗಳ ಆಧಾರದ ಮೇಲೆ ಬೃಹತ್ ಶಿಲಾಯುಗದ ಸಂಸ್ಕೃತಿಯ ವಿಸ್ತೃತವಾಗಿ ಹರಡಿತ್ತೆಂದು ಸ್ಪಷ್ಟವಾಗುತ್ತದೆ.[೧೦]

| ಕ್ರ. ಸಂ | ಶಾಸನ | ಅರಸ | ವರ್ಷ |
|---|---|---|---|
| ೧. | ಆಡೂರ | ೨ನೇ ಜಯಸಿಂಹ | ೧೦೩೪ |
| | | ೧ನೇಸೋಮೇಶ್ವರ | ೧೦೪೪ |
| | | ಜಗದೇಕಮಲ್ಲ | -- |
| | | ೨ನೇ ಜಗದೇಕಮಲ್ಲ | -- |
| | | ೪ನೇ ಸೋಮೇಶ್ವರ | |
| ೨. | ಉಪ್ಪ ಹುಣಸಿ | ೨ನೇ ಜಯಸಿಂಹ | ೧೦೨೮ |
| | | ೨ನೇ ಜಗದೇಕಮಲ್ಲ | ೧೧೪೬ |
| | | ೪ನೇ ಸೋಮೇಶ್ವರ | -- |
| ೩. | ಎಲಿವಾಳ | ವಿಕ್ರಮಾಧಿತ್ಯ | -- |
| ೪. | ಕರಗುದರಿ | ೪ನೇ ವಿಕ್ರಮಾಧಿತ್ಯ | ೧೦೦೦-೦೯ |
| | | ೨ನೇ ಜಗದೇಕಮಲ್ಲ | |
| ೫. | ಕುಂಟನ ದೂಸಳ್ಳಿ | ೧ನೇ ತೈಲ | ೯೪೮ |
| | | ೨ನೇ ಜಗದೇಕಮಲ್ಲ | ೧೨ |
| ೬. | ಕೂಡಲ | -- | -- |
| ೭. | ಗುಡ ಗುಡಿ | ವಿಕ್ರಮಾಧಿತ್ಯ | ೭ |
| | | ಅಮೋಘವರ್ಷ | ೯ |
| | | ೨ನೇ ಜಯಸಿಂಹ | -- |
| | | ೨ನೇ ಸೋಮೇಶ್ವರ | ೧೦೨೮ |
| | | ಜಗದೇಕನಲ್ಲ | |
| ೮. | ಗೆಜ್ಜೆಹಳ್ಳಿ | ೨ನೇ ವಿಕ್ರಮಾಧಿತ್ಯ | ೧೧೦೭ |
| | | ಸುಕುಮಿ | ೧೧೦೭ |

| | | | |
|---|---|---|---|
| | | ತೈಲ | -- |
| ೯. | ನಿಡಸಂಗಿ | ೪ನೇ ವಿಕ್ರಮಾಧಿತ್ಯ<br>ಮಲ್ಲಿದೇವ<br>----<br>----<br>---- | ೧೧-೧೨<br>೧೨೯೨<br>--<br>--<br>-- |
| ೧೦. | ನೀರಲಗಿ | ಅಕಾಲವರ್ಷ<br>೧ನೇ ಸೋಮೇಶ್ವರ<br>೨ನೇ ಸೋಮೇಶ್ವರ<br>ಸಿಂಘಣ | <br>೧೦೫೩<br>೧೦೭೪<br>೧೫ |
| ೧೧. | ಬಾಳಬೀಡ | ತೈಲಪ<br>೬ನೇ ವಿಕ್ರಮಾಧಿತ್ಯ<br>೬ನೇ ವಿಕ್ರಮಾಧಿತ್ಯ<br>ಬಿಜ್ಜಳ | ೧೧೧೮<br><br>೧೦೭೪<br>೧೧೩೧ |
| ೧೨. | ಬಾಳೂರ | ವಿಕ್ರಮಾಧಿತ್ಯ | ೧೧೨೫ |
| ೧೩. | ಬೈಚವಳ್ಳಿ | ೨ನೇ ತೈಲ<br>೧ನೇ ಸೋಮೇಶ್ವರ<br>ಕಾಮದೇವ<br>ಅಚ್ಯುತರಾಯ | -<br>೯೦೫<br>೯೦೫<br>೧೫೩೬ |
| ೧೪. | ಮಕರವಳ್ಳಿ | ೨ನೇ ಸೋಮೇಶ್ವರ<br>೨ನೇ ಜಗದೇಕಮಲ್ಲ | <br>೧೦೪೫ |
| | ರಾಮತೀರ್ಥ | | |

೧೧.

ಹಾನಗಲ್ಲು ಪರಿಸರದ ರಾಜಕೀಯಕ್ಕೆ ಸಂಬಂಧಿಸಿದಂತೆ ೫೦೦ಕ್ಕೂ ಹೆಚ್ಚು ಶಾಸನವು ಲಭ್ಯವಿದ್ದು, ಹಲವಾರು ಶಾಸನಗಳು ತೃಟಿತಗೊಂಡಿವೆ.

**ಶಾತವಾಹನರು :**

ಪ್ರಸ್ತುತ ಹಾನಗಲ್ಲು ಪರಿಸರದ ಚರಿತ್ರೆ ಶಾತವಾಹನರಿಂದ ಪ್ರಾರಂಭವಾಗುತ್ತದೆ. ಮೌರ್ಯರ ಪತನಾ ನಂತರದಲ್ಲಿ ಆಂಧ್ರಭೃತ್ಯರೆನಿಸಿಕೊಂಡ ಶಾತವಾಹನರು ದಕ್ಷಿಣ ಭಾರತವನ್ನು ಆಳಿದರು. ಶಾತವಾಹನರ ಶಾಖೆಗಳಲ್ಲಿ ಒಂದು ಶಾಖೆ ಕರ್ನಾಟಕದ ಕುಂತಲದೇಶವನ್ನು ಆಳುತ್ತಿತ್ತೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಶಾಸನಗಳು ಅವರ ಅಭಿಪ್ರಾಯಕ್ಕೆ ಆಧಾರವಾಗಿವೆ. ಶಾತವಾಹನರ ಮೂಲ ದಕ್ಷಿಣ ಭಾರತವಾಗಿದ್ದರಿಂದ ಕುಂತಳನಾಡಿನ ಮೇಲೆ ಅವರ ರಾಜಕೀಯ ಪ್ರಭಾವ ಹೆಚ್ಚು ಸ್ಪಷ್ಟವಾಗಿ ಕಂಡುಬರುತ್ತದೆ. ಈ ಮಾತು ಹಾನಗಲ್ಲಿಗೂ ಅನ್ವಯಿಸುತ್ತದೆ. ಕುಂತಳನಾಡಿನ ನಾಗವಂಶದವರೊಂದಿಗೆ ಈ ಶಾತವಾಹನರು ಸಂಬಂಧ ಬೆಳೆಸಿರುವ ಸಾಧ್ಯತೆ ಇದೆ.

ಪ್ರಾಚೀನ ಭಾರತೀಯ ಚರಿತ್ರೆಯಲ್ಲಿ ಚಿರಸ್ಮರಣೀಯ ರಾಜವಂಶ ಶಾತವಾಹನರದ್ದು, ದಕ್ಷಿಣ ಭಾರತದಲ್ಲಿ ಪ್ರಪ್ರಥಮದಲ್ಲಿ ಸಾಮ್ರಾಜ್ಯ ನಿರ್ಮಿಸಿದ ಶಾತವಾಹನರು ಕ್ರಿ.ಪೂ. ೨೩೦ರಲ್ಲಿ ಪ್ರಾರಂಭವಾಗಿ ಕ್ರಿ.ಶ. ೧೯೯ರಲ್ಲಿ ಯಜ್ಞ ಸಾತಕರ್ಣಿಯೊಂದಿಗೆ ಅವನತಿ ಹೊಂದಿತು. ಈ ರಾಜವಂಶ ಸುಮಾರು. ೪ ಶತಮಾನಗಳ ಕಾಲ ಅತ್ಯಂತ ವೈಭವದಿಂದ ಆಳ್ವಿಕೆ ಮಾಡಿತು.

ಶಾತವಾಹನರ ಅನೇಕ ಶಾಖೆಗಳಲ್ಲಿ ಒಂದು ಉಪಶಾಖೆಯಾದ ಕುಂತಳವನ್ನು ಆಳಿತು. ಇದಕ್ಕೆ ಶಾತಕರ್ಣಿ ಎಂಬ ರಾಜನ ಹೆಸರು ಆಧಾರವಾಗಿದೆ. ಗೌತಮಿ ಪುತ್ರನ ನಾಸಿಕ್ ಶಾಸನ, ಪುಳಮಾಯಿಯ ಬಳ್ಳಾರಿ ಸಮೀಪದ ಹಿರೇಹಡಗಲಿ ತಾಮ್ರಪಟ ಶಾಸನ, ಶಾತವಾಹನರು ಬನವಾಸಿ ಪ್ರದೇಶವನ್ನು ಆಳುತ್ತಿದ್ದರೆಂಬುದಕ್ಕೆ ಸಾಕ್ಷಿಯಾಗಿವೆ. ಹಾಗೂ ತಾಳಗುಂದ ಶಾಸನದಲ್ಲಿ ೨ನೇ ಶಾತಕರ್ಣಿ ಪ್ರಣವೇಶ್ವರ ದೇವಸ್ಥಾನಕ್ಕೆ ಭೇಟಿಕೊಟ್ಟ ವಿವರವಿದೆ. ಬನವಾಸಿಯಲ್ಲಿ ಕ್ರಿ.ಶ.೨ನೇ ಶತಮಾನಕ್ಕೆ ಸೇರಿದ ಶಿವಸಿರಿ ಪುಳಮಾಯಿಯ ಶಾಸನವೊಂದು ದೊರತಿದೆ. ಜೊತೆಗೆ ವಾತ್ಸಾಯನನ ಕಾಲದ ಮತ್ತು ರಾಜಶೇಖರನ ಕಾವ್ಯ ಮೀಮಾಂಸೆಯಲ್ಲಿ ಕುಂತಳ ಶಾತಕವರ್ಣಿ ಹೆಸರಿದೆ. ಒಟ್ಟಾರೆ ಶಾತವಾಹನರು ಹಾನಗಲ್ಲು ಪರಿಸರದ ಮೇಲೆ ಆಡಳಿತ ನಡೆಸಿದರೆಂದು ತಿಳಿಯಬಹುದಾಗಿದೆ.[೧೨.]

**ಚುಟುಗಳು :**

ಶಾತವಾಹನರ ಅವನತಿಯ ನಂತರ ೩ನೇಶತಮಾನದಲ್ಲಿ ಶಾತವಾಹನರ ಒಂದು ಉಪವಂಶ ಚುಟುಗಳದ್ದಾಗಿತ್ತು. ಚುಟು ರಾಜನಾದ ಹಾರೀತಿಪುತ್ರ ವಿಣ್ಣುಕಡ ಚುಟುಕಲಾನಂದ

ಎಂಬ ರಾಜನ ೨ನೇ ವರ್ಷದ ಆಳ್ವಿಕೆಯ ಕಾಲದಲ್ಲಿ ಶಿವಮೊಗ್ಗ ಜಿಲ್ಲೆಯ ಮಳವಳ್ಳಿಯಲ್ಲಿ ದೊರೆತ ಒಂದು ಶಾಸನ, ಬನವಾಸಿಯ ನಾಗಶಿಲಾಶಾಸನಗಳಿಂದ ಚುಟುವಂಶ ೨ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದರು ಎಂದು ತಿಳಿದುಬರುತ್ತದೆ. ಇದಲ್ಲದೆ ಇವರ ನಾಣ್ಯಗಳು, ಬನವಾಸಿ, ಕಾರವಾರದ ಚಂಪ್ರವಳ್ಳಿಯಲ್ಲಿ ದೊರೆತ್ತಿದ್ದರಿಂದ ಈ ಪ್ರದೇಶಗಳ ಮಧ್ಯೆಬರುವ ಇವರು ಆಳ್ವಿಕೆ ನಡೆಸಿರಬಹುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.

ಪ್ರಸ್ತುತ ಮಳವಳ್ಳಿ ಮತ್ತು ನಾಗರಖಂಡ ೭೦, ಎಡನಾಡು–೨೦ ವ್ಯಾಪ್ತಿಯ ಮಧ್ಯದಲ್ಲಿ ಬರುವ ಹಾನಗಲ್ಲು ಚುಟುಗಳ ಅಧೀನದಲ್ಲಿತ್ತೆಂದು, ಹಾಗೂ ಬನವಾಸಿಯನ್ನು ಕೇಂದ್ರವನ್ನಾಗಿಸಿಕೊಂಡು ಆಳುತ್ತಿದ್ದರು ಎಂದು ಸ್ಪಷ್ಟವಾಗುತ್ತದೆ.[೧೩]

**ಬನವಾಸಿ ಕದಂಬರು :**

ಕನ್ನಡದ ಪ್ರಪ್ರಥಮ ರಾಜ್ಯ ಮನೆತನವಾದ ಬನವಾಸಿ ಕದಂಬರದು, ಪಲ್ಲವರನ್ನು ಸೋಲಿಸಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದರು. ಸುಮಾರು ಕ್ರಿ.ಶ. ೪ನೇ ಶತಮಾನದಿಂದ ೬ನೇ ಶತಮಾನದವರಿಗೆ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು. ಬನವಾಸಿ–೧೨೦೦೦ದಲ್ಲಿ ಹಾನಗಲ್ಲು–೫೦೦ ಬಂದಂತೆ ಗುತ್ತಿರಟ್ಟಪಳ್ಳಿ, ಹಲಸಿ, ಲಿಂಬೆ ಮುಂತಾದವು ೧೨೦೦೦ ನಾಡನ್ನು ವಿಭಾಗಿಸಿ ಪ್ರಾಂತ್ಯಮಾಡಿ ಆಳ್ವಿಕೆ ಮಾಡಿದರು. ಇವರ ಕಾಲದ ಹಾನಗಲ್ಲು–೫೦೦ ಒಂದು ಪ್ರಮುಖ ಪ್ರಾಂತ್ಯವಾಗಿತ್ತು. ಬನವಾಸಿ ಕದಂಬರ ಅವನತಿಯ ನಂತರದಲ್ಲಿ ಕೆಲವು ಶತಮಾನಗಳ ನಂತರ ೫೦೦ ಪ್ರಾಂತ್ಯವು ಸ್ವತಂತ್ರವಾದ ಸಾಮಂತ ಮನೆತನವಾಗಿ ಅಧಿಕಾರಕ್ಕೆ ಬಂದಿತು.

ಕರ್ನಾಟಕದಲ್ಲಿ ಈ ಮನೆತನದ ಆರಂಭದ ಮೊದಲೆರಡು ಶಾಖೆಗಳೆಂದರೆ, ೧) ಹಾನಗಲ್ಲ ಕದಂಬರು, ೨) ಗೋವೆ ಕದಂಬರು. ಅನಿಲಾಪುರ ಚಂದ್ರಾಪುರ ಮುಂದೆ ಕೃಷ್ಣವರ್ಮನ ಕಾಲದಲ್ಲಿ ಉಚ್ಚಂಗಿ ಕದಂಬರನ್ನು ಕಾಣಬಹುದು.[೧೪]

**ಬಾದಾಮಿ ಚಾಲುಕ್ಯರು :**

ಕದಂಬರು ತರುವಾಯ ಕರ್ನಾಟಕದಲ್ಲಿ ಕ್ರಿ.ಶ. ೬ನೇ ಶತಮಾನದಲ್ಲಿ ಕದಂಬ ಮಾಂಡಲಿಕನಾದ ಜಯಸಿಂಹ ಬಾದಾಮಿ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪನೆಮಾಡಿ ಈತನ ನಂತರ ಆಳ್ವಿಕೆಗೆ ಬಂದ ೧ನೇ ಪುಲಕೇಶಿ ಬನವಾಸಿ ಕದಂಬರನ್ನು ಸೋಲಿಸಿ ಸ್ವತಂತ್ರ ರಾಜ್ಯ ನಿರ್ಮಾಣ ಮಾಡಿದನೆಂದು ಬಾದಾಮಿ ಬಂಡೆಗಲ್ಲಿನ ಶಾಸನ ತಿಳಿಸುತ್ತದೆ.

ಬಾದಾಮಿ ಚಾಲುಕ್ಯರ ಪ್ರಸಿದ್ಧ ದೊರೆ ಇಮ್ಮಡಿ ಪುಲಕೇಶಿ ಬನವಾಸಿ-೧೨೦೦೦ರ ಮೇಲೆ ದಾಳಿಮಾಡಿ ಬನವಾಸಿಯನ್ನು ಗೆದ್ದು ಕದಂಬರನ್ನು ಅಧೀನ ಸಾಮಂತರಾಗಿ ಮಾಡಿಕೊಂಡ ಎಂಬುದಾಗಿ ಐಹೊಳೆ ಶಾಸನ ತಿಳಿಸುತ್ತದೆ. ಅಂದಿನಿಂದ ಕರ್ನಾಟಕದ ಪಶ್ಚಿಮ ಬಹುಭಾಗ ಬಾದಾಮಿ ಚಾಲುಕ್ಯರ ಅಧೀನವಾಯಿತೆಂದು ತಿಳಿಸುತ್ತದೆ. ಶಿಕಾರಿಪುರ ತಾಲೂಕಿನ ಶಾಸನವು ಇಮ್ಮಡಿ ಪುಲಕೇಶಿಯ ಹೆಸರನ್ನು ಸೂಚಿಸುತ್ತದೆ. ಹಾಗೆಯೇ ಶಿಕಾರಿಪುರ ತಾಲೂಕಿನ ಬಳ್ಳಿಗಾವೆ ಸೇಂದ್ರಕರ ಶಾಸನದಲ್ಲಿ ಚಾಲುಕ್ಯ ವಿನಯಾದಿತ್ಯ ಹೆಸರು ಉಲ್ಲೇಖವಿದೆ. ಹಾಗೆಯೇ ಮಾಯತಮ್ಮನ ಮುಚ್ಚಡಿ ಸಿರೇವಾಡದ ಶಾಸನಗಳಲ್ಲಿ ಚಾಲುಕ್ಯರ ವಿಜಯಾದಿತ್ಯನ ಹೆಸರು ಕಂಡುಬರುವುದರಿಂದ ಈ ಪ್ರದೇಶ ಆಳ್ವಿಕೆಗೆ ಒಳಪಟ್ಟಿದ್ದಿತು. ಅಲ್ಲದೆ ೨ನೇ ಕೀರ್ತಿವರ್ಮನ ಕಾಲದಲ್ಲಿ ಬನವಾಸಿ ೧೨೦೦೦ ಎಂದು ಕರೆಯುತ್ತಿದ್ದರು. ಹೀಗಾಗಿ ಹಾನಗಲ್ಲು-೫೦೦ ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿದ್ದಿತು ಎಂದು ಗೊತ್ತಾಗಿದೆ.[೧೫]

**ರಾಷ್ಟ್ರಕೂಟರು:**

ಬಾದಾಮಿ ಚಾಲುಕ್ಯರನ್ನು ಸೋಲಿಸಿ ಕ್ರಿ.ಶ ೮ನೇ ಶತಮಾನದ ಪ್ರಾರಂಭದಲ್ಲಿ ರಾಷ್ಟ್ರಕೂಟರ ಆಳ್ವಿಕೆಗೆ ಬಂದರು. ರಾಷ್ಟ್ರಕೂಟರ ಒಂದನೆಯ ಕೃಷ್ಣನ ಅಧೀನವಾಗಿ ಬನವಾಸಿ ಮಂಡಲವನ್ನು ಆಳುತ್ತಿದ್ದ ಮಹಾಮಂಡಲಧಿಕಾರಿಯಾದ ಸೇನಾವರ ಮಾರಕ್ಕ ಅರಸನು ಆಳುತ್ತಿದ್ದುದಾಗಿ ಮುಳತಳ್ಳಿ ಮತ್ತು ಮಲ್ಲೇನಹಳ್ಳಿ ಶಾಸನ ಉಲ್ಲೇಖಿಸುತ್ತವೆ. ಇಂದಿನ ಕೋಟಿಪುರ ಗ್ರಾಮದ ಕೈಟಭೇಶ್ವರ ದೇವಾಲಯದ ಪ್ರಾಂಗಣದಲ್ಲಿ ರಾಷ್ಟ್ರಕೂಟರ ಕಾಲದ ಸಣ್ಣದುರ್ಗೆ ಇತರ ಗುಡಿಗಳಿವೆ. ಹಾಗೆಯೇ ಹಾನಗಲ್ಲು ಕೋಟೆಯೊಳಗಿನ ಜೈನ ದೇವಾಲಯವಾಗಿದೆ, ಅಂದರೆ ಹಾನಗಲ್ ಐನೂರು ಪ್ರದೇಶ ರಾಷ್ಟ್ರಕೂಟರ ರಾಜಕೀಯ ಪ್ರಭಾವ ವಲಯದ ಪ್ರಾಂತ್ಯವಾಗಿತ್ತು ಎಂದು ತಿಳಿದುಬರುತ್ತದೆ.[೧೬]

**ಕಲ್ಯಾಣದ ಚಾಳುಕ್ಯರು:**

ರಾಷ್ಟ್ರಕೂಟರನ್ನು ಸೋಲಿಸಿ ಚಕ್ರಾಧಿಪತ್ಯ ಸ್ಥಾಪಿಸಿದ ಕಲ್ಯಾಣ ಚಾಳುಕ್ಯರ ನೂರಾರು ಶಾಸನಗಳು ಹಾನಗಲ್ಲು ಪರಿಸರದ ಬೊಮ್ಮಿನಹಳ್ಳ, ಕರಗುದರಿ, ತಿಳಿವಳ್ಳಿ, ಕಲಕೇರಿ ಬಾಳೆಂಬೀಡ, ಅಕ್ಕಿ ಆಲೂರ, ಹಾನಗಲ್ಲು ಮುಂತಾದ ಕಡೆಗಳಲ್ಲಿ ಶಾಸನಗಳು ದೊರೆತಿವೆ. ಅಲ್ಲದೆ ಹಾನಗಲ್ಲು ತಾರಕೇಶ್ವರ ಮತ್ತು ಗಣಪತಿ ದೇವಾಲಯ, ಬಾಳಂಬೀಡದ ಜೈನ ದೇವಾಲಯ, ತಿಳಿವಳ್ಳಿಯ ಶಾಂತೇಶ್ವರ, ಕಲಕೇರಿ ಬಸವೇಶ್ವರ, ಸೋಮೇಶ್ವರ ದೇವಾಲಯ ಕಲ್ಯಾಣ ಚಾಳುಕ್ಯರ ಕಾಲದಲ್ಲಿ

ನಿರ್ಮಾಣಗೊಂಡಿವೆ. ಅಲ್ಲದೇ ಬನವಾಸಿ ವಂಶ ಕೊನೆಯಾಗಿ ಹಾನಗಲ್, ಬಂದಳಿಕೆ, ಗೋವೆ ಕದಂಬರ ಸಾಮಂತ ಮನೆತನಗಳು ಪ್ರಾರಂಭವಾದವು. ಹಾನಗಲ್ ಕದಂಬರು ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದರೆಂಬುದು ಶಾಸನಗಳಿಂದ ತಿಳಿದುಬರುತ್ತದೆ.[೧೭]

**ಕಲಚೂರ್ಯರ:**

ಕಲ್ಯಾಣ ಚಾಲುಕ್ಯರ ಸಂಬಂಧಿಗಳಾದ ಕಲಚೂರಿಗಳು, ಕಲ್ಯಾಣ ಚಾಲುಕ್ಯರ ದೊರೆ ೪ನೇ ಸೋಮೇಶ್ವರನನ್ನು ಬದಿಗೊತ್ತಿ ಕಲ್ಯಾಣವನ್ನು ಆಕ್ರಮಿಸಿದರು. ಇವರು ಕ್ರಿ.ಶ. ೧೧೫೫ ರಿಂದ ೧೧೮೨ ರವರೆಗ ಸುಮಾರು ೨೭ ವರ್ಷಗಳ ಕಾಲ ಸ್ವತಂತ್ರವಾಗಿ ಆಳ್ವಿಕೆ ನಡೆಸಿದರು. ಇವರು ಕಲ್ಯಾಣ ಚಾಲುಕ್ಯರ ಅಧೀನದಲ್ಲಿದ್ದ ಕಲಚೂರಿ ದೊರೆಯ ಕಾಲದ ಶಾಸನಗಳು ಪ್ರಾಚೀನ ಹಾನಗಲ್ಲು-೫೦೦ ವ್ಯಾಪ್ತಿಯಲ್ಲಿ ಹಲವಾರು ಶಾಸನಗಳು ದೊರೆತಿವೆ. [೧೮]

**ಹೊಯ್ಸಳರು:**

ಕ್ರಿ.ಶ. ೧೨ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಅಧೀನ ಸಮಕಾಲೀನರಾಗಿ ದಕ್ಷಿಣ ಕರ್ನಾಟಕದಲ್ಲಿ ಕ್ರಿ.ಶ ೧೪ನೇ ಶತಮಾನದವರೆಗೆ ಆಳ್ವಿಕೆ ಮಾಡಿದರು. ಇವರ ಕಾಲದಲ್ಲಿ ಹಾನಗಲ್ಲು, ಬಂಕಾಪೂರದಲ್ಲಿನ ಅಧಿಪತ್ಯಕ್ಕಾಗಿ ಹೊಯ್ಸಳರಿಗೂ ಹಾಗೂ ಕಲ್ಯಾಣ ಚಾಲುಕ್ಯರ ನಡುವೆ ದೀರ್ಘ ಹೋರಾಟ ನಡೆಯಿತು. ಹೊಯ್ಸಳರು ಒಂದನೇ ಬಲ್ಲಾಳ ವಿಷ್ಣುವರ್ಧನರು ಸುಮಾರು ೧ತಿಂಗಳಗೂ  ಹೆಚ್ಚು ಕಾಲ ಹಾನಗಲ್ಲಿನಲ್ಲಿ ಬೀಡುಬಿಟ್ಟಿರುವುದು, ೩ ತಿಂಗಳಿಗೂ ಹೆಚ್ಚು ಕಾಲ ೧ನೇ ಬಲ್ಲಾಳನ ಹಾನಗಲ್ಲುನ್ನು ವಶಪಡಿಸಿಕೊಂಡಿರುವುದು ತಿಳಿದುಬರುತ್ತದೆ. ಹೊಯ್ಸಳರ ಪ್ರಮುಖ ಕೋಟೆಗಳಲ್ಲಿ ಹಾನಗಲ್ಲು ಕೋಟೆಯು ಒಂದು ಎಂಬುದು ಹೊಯ್ಸಳರ ಶಾಸನದಿಂದ ತಿಳಿದುಬರುತ್ತದೆ. ಅಲ್ಲದೆ ೨ನೇಬಲ್ಲಾಳನ ಹಾನಗಲ್ಲು ಶಾಸನದಿಂದ ಹೊಯ್ಸಳರು ಹಾನಗಲ್ಲು ಮೇಲೆ ಅಧಿಪತ್ಯ ಹೊಂದಿದ್ದರು ಎಂಬುದು ತಿಳಿದು ಬರುತ್ತದೆ.[೧೯]

**ದೇವಗಿರಿಯ ಯಾದವರು:**

ಕ್ರಿ.ಶ ೧೩ನೇ ಶತಮಾನದ ಪ್ರವರ್ಧಮಾನದಲ್ಲಿ ಕಲ್ಯಾಣ ಚಾಲುಕ್ಯರ ಸಮಕಾಲೀನರಾಗಿ ದಕ್ಷಿಣ ಭಾರತದಲ್ಲಿ ಆಡಳಿತಕ್ಕೆ ಬಂದ ಯಾದವರು ಕ್ರಿ.ಶ.೧೪ನೇ ಶತಮಾನದವರೆಗೆ ಆಳ್ವಿಕೆ ನಡೆಸಿದರು. ಉತ್ತರ ಕರ್ನಾಟಕದ ಬಹುಭಾಗವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರು. ಅದೇ ರೀತಿಯಾಗಿ ಹಾನಗಲ್ಲು ಪರಿಸರವು ಇವರ ವ್ಯಾಪ್ತಿಗೆ ಒಳಪಟ್ಟಿತ್ತು. ಇದಕ್ಕೆ ಸಾಕ್ಷಿಯಾಗಿ

ತಿಳಿವಳ್ಳಿ, ಹಾನಗಲ್ಲು ಮುಂತಾದ ಕಡೆಗಳಲ್ಲಿ ಯಾದವರ ದೊರೆ ರಾಮಚಂದ್ರದೇವ ಮತ್ತು ಸಿಂಘಣನ ಶಾಸನಗಳು ದೊರೆತಿವೆ.[೨೦]

**ವಿಜಯನಗರ:**

ಮಧ್ಯಕಾಲೀನ ಕರ್ನಾಟಕದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯ ಮಹತ್ವದಾಗಿದೆ, ಇವರ ಕಾಲದಲ್ಲಿ ಹಾನಗಲ್ಲು ಪ್ರದೇಶದ ಮೇಲೆ ವಿಜಯನಗರದ ದೊರೆಗಳು ಹಿಡಿತ ಸಾಧಿಸಿದ್ದರು. ಅಲ್ಲದೇ ಈ ಕಾಲದ ಹಾನಗಲ್ಲು-೫೦೦ರ ಪರಿಸರದಲ್ಲಿ ಕೊನೆಯ ದೊರೆ ಪುರಂದರರಾಯ ಕ್ರಿ.ಶ.೧೩೧೫-೧೩೪೭ವರೆಗೆ ಆಳಿದ. ನಂತರ ಕಾಲದಲ್ಲಿ ಹಾನಗಲ್ಲು ಕದಂಬರ ವಂಶವು ಅವನತಿಯನ್ನು ಹೊಂದಿತು. ಈ ರಾಜಕೀಯ ಆಡಳಿತ ಪರಿಣಾಮ ಹಿನ್ನೆಲೆಯಲ್ಲಿ ಹಾನಗಲ್ಲು ಪರಿಸರದ ಚರಿತ್ರೆ ಕರ್ನಾಟಕ ಇತಿಹಾಸ ಪುಟದಲ್ಲಿ ಅವಿಸ್ಮರಣೀಯವಾಗಿ ಉಳಿವುಂತೆ ಆಗಿದೆ.[೨೧]

## ಅಡಿಟಿಪ್ಪಣಿಗಳು :

೧. ಹಾವೇರಿ ಜಿಲ್ಲೆಯ ಅಂಕಿ ಅಂಶ ನೋಟ.. ೨೦೧೫-೧೬. ಪ್ರಕಟನೆ ಜಿಲ್ಲಾ ಸಾಂಖ್ಯಿ ಸಂಗ್ರಹಣಾ ಅಧಿಕಾರಿಗಳು ಹಾವೇರಿ.

೨. ಅರಣ್ಯ ಇಲಾಖೆ ಮಾಹಿತಿ ಹಾನಗಲ್ಲು. ಹಾವೇರಿ ಜಿಲ್ಲೆಯ ಅಂಕಿ ಅಂಶ ನೋಟ.. ೨೦೧೫-೧೬.

೩. ಹಾವೇರಿ ಜಿಲ್ಲೆಯ ಅಂಕಿ ಅಂಶ ನೋಟ.. ೨೦೧೫-೧೬. ಪ್ರಕಟನೆ ಜಿಲ್ಲಾ ಸಾಂಖ್ಯಿ ಸಂಗ್ರಹಣಾ ಅಧಿಕಾರಿಗಳು ಹಾವೇರಿ.

೪. ಹಾವೇರಿ ಜಿಲ್ಲೆಯ ಅಂಕಿ ಅಂಶ ನೋಟ.. ೨೦೧೫-೧೬. ಪ್ರಕಟನೆ ಜಿಲ್ಲಾ ಸಾಂಖ್ಯಿ ಸಂಗ್ರಹಣಾ ಅಧಿಕಾರಿಗಳು ಹಾವೇರಿ.

೫. ವಾಸುದೇವ ಬಡಿಗೇರ (ಹಾನಗಲ್ಲು) ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲಿಕೆ ಇಸ್ವಿ ೨೦೦೮ ಪುಟ-೧೭

೬. ಪೂರ್ವೋಕ್ತ., ಪುಟ.. ೨೧

೭. ಪೂರ್ವೋಕ್ತ., ಪುಟ.. ೨೧

೮. ಪೂರ್ವೋಕ್ತ. ಪುಟ ೨೨

೯. ಪೂರ್ವೋಕ್ತ., ಪುಟ.. ೨೨

೧೦. ಪೂರ್ವೋಕ್ತ., ಪುಟ.. ೨೩

೧೧. ಎಂ.ಎಂ. ಕಲಬುರ್ಗಿ. ಧಾರವಾಡ ಜಿಲ್ಲಾ ಶಾಸನ ಸೂಚಿ. ೧೯೭೫. ಕ.ವಿ.ವಿ. ಧಾರವಾಡ. ಪುಟ ಸಂ. ೫೮-೫೯

೧೨. ವಿರಾಟನಗರದ ಇತಿಹಾಸ. ಪೂರ್ವೋಕ್ತ., ಪುಟ..೧೭

೧೩. ವಿರಾಟನಗರದ ಇತಿಹಾಸ. ಪೂರ್ವೋಕ್ತ., ಪುಟ..೧೭

೧೪. ಹಾನಗಲ್ಲು ಕದಂಬರು. ಚೆನ್ನಕ್ಕ ಪಾವಟೆ. ೧೯೯೫. ಪುಟ ಸಂ.೨೬

೧೫. ಹಾನಗಲ್ಲು ಕದಂಬರು. ಚೆನ್ನಕ್ಕ ಪಾವಟೆ. ೧೯೯೫. ಪುಟ ಸಂ.೨೬

೧೬. ವಿರಾಟನಗರದ ಇತಿಹಾಸ, ಪೂರ್ವೋಕ್ತ, ಪುಟ ೧೭

೧೭. ವಿರಾಟನಗರದ ಇತಿಹಾಸ, ಪೂರ್ವೋಕ್ತ, ಪುಟ ೧೭

೧೮. ವಿರಾಟನಗರದ ಇತಿಹಾಸ, ಪೂರ್ವೋಕ್ತ. ಪುಟ ೧೭

೧೯. ವಿರಾಟನಗರದ ಇತಿಹಾಸ, ಪೂರ್ವೋಕ್ತ. ಪುಟ ೧೭

೨೦. ವಿರಾಟನಗರದ ಇತಿಹಾಸ, ಪೂರ್ವೋಕ್ತ. ಪುಟ ೧೭

೨೧. ವಿರಾಟನಗರದ ಇತಿಹಾಸ, ಪೂರ್ವೋಕ್ತ. ಪುಟ ೧೭

# ಅಧ್ಯಾಯ – ೩
# ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ

ಜಲ ಸಂಪನ್ಮೂಲ ವ್ಯವಸ್ಥೆ ಮಾನವನ ಚರಿತ್ರೆಯಲ್ಲಿ ಶಿಲಾಸಂಸ್ಕೃತಿಯ ಕಾಲದಿಂದಲೂ ಪ್ರಮುಖಪಾತ್ರ ವಹಿಸುತ್ತಾ ಬಂದಿದೆ. ಹೆಚ್ಚಿನ ನಾಗರಿಕತೆಗಳು ಬೆಳೆದು ಬಂದಿದ್ದು ನದಿ–ಹಳ್ಳ ಕೊಳ್ಳಗಳ ತಟದಲ್ಲೇ ಕೆರೆಗಳ ನಿರ್ಮಾಣ–ನಿರ್ವಹಣೆ ಮತ್ತು ಅದರಲ್ಲಿ ನಮ್ಮ ಪೂರ್ವಜರು ಪಾಲುಗೊಂಡ ರೀತಿ–ನೀತಿ ತುಂಬಾ ಸ್ವಾರಸ್ಯಕರವಾದ ಅಧ್ಯಯನವಾಗಿದೆ. ಇತಿಹಾಸದ ಪುಟಗಳಲ್ಲಿ ಕಾಣಿಸಿಕೊಂಡ ಮೌರ್ಯ ಕಾಲದಲ್ಲಿ ಕೆರೆ ನಿರ್ಮಾಣ ಪ್ರಕ್ರಿಯೆ ಮತ್ತು ದುರಸ್ತಿ ಆರಂಭಗೊಂಡಿದ್ದುದಂತೂ ಸ್ಪಷ್ಟ. ನಂತರ ಕಾಲದಲ್ಲಿ ಅಧಿಕಾರಕ್ಕೆ ಬಂದ ಶಾತವಾಹನರು ಮತ್ತು ಕದಂಬರ ಕಾಲದಲ್ಲಿ ಕೆರೆ ಕಾಲುವೆಗಳನ್ನು ಕಟ್ಟಿಸುವ ಪರಂಪರೆ ಬೆಳೆದುಕೊಂಡು ಬಂದಿರುವುದರ ಬಗ್ಗೆ ಸಾಕಷ್ಟು ಶಾಸನಗಳಲ್ಲಿ ದಾಖಲಾಗಿದೆ. ಅದಾದ ಬಳಿಕ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ವಿವಿಧ ಅರಸು ಮನೆತನಗಳ ಕಾಲದಲ್ಲಿ ಈ ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ ವ್ಯವಸ್ಥೆ ೧೯ನೇ ಶತಮಾನದವರೆಗೂ ಅವಿರತವಾಗಿ ಬೆಳೆದುಕೊಂಡು ಬಂದಿದೆ[೧]

"ಕೆರೆಯಂ ಕಟಿಸು ಭಾವಿಯಂ ಸವೆಸು ದೇವಾಗಾರಮಂ ಮಾಡಿಸ
ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ
ರ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯನ್ನುತ್ತಿಯೆಂತೆಲ್ಲವಂ ಪಿಂದೆ ತಾ.
ಯೆರೆದಳ್ವಾಲೆರೆವಂದು ತೊಟ್ಟು ಕಿವಿಯೊಳ್ಂ ಲಕ್ಷ್ಮೀಧರಾಮಾತ್ಯನಾ"

ಕ್ರಿ.ಶ.೧೪೧೧ರ ಪ್ರೌಡ ದೇವರಾಯನ ಶಾಸನದಲ್ಲಿ ಮಂತ್ರಿ ಲಕ್ಷೀಧರನು ಕೂಸಾಗಿದ್ದಾಗ ಅವನ ತಾಯಿ ಹಾಲು ಎರೆಯುತ್ತಿದ್ದ ಸಂದರ್ಭದಲ್ಲಿ ಹೇಳಿದ ಮಾತಿದು. ತಾಯಿ ಹಾಲನೀಯುವಾಗ ಕಂದನಿಗೆ ಕಿವಿಯಲ್ಲಿ ಹೇಳುವ ಈ ಪಿಸುಮಾತು ಹಿಂದಿನವರು ತಮ್ಮ ಜೀವನದಲ್ಲಿ ಪಾಲಿಸಬೇಕಾದ ನಿಯಮಗಳಾಗಿವೆ. ಇವುಗಳಲ್ಲಿ ಕೆರೆ ಬಾವಿಗಳ ನಿರ್ಮಾಣವು ಪ್ರಥಮ ಪ್ರಾಶಸ್ತ್ರದಲ್ಲಿ ಸೇರಿರುವುದು ವಿಶೇಷವಾದುದು. ಇದೇ ಶಾಸನವು ದೇವರಾಯನ ಮಂತ್ರಿಗಳಾದ ಮಾದರಸ ಮತ್ತು ಸಾಯಣ್ಣರ ಕುರಿತು

"ತೋಡದ ಬಾವಿಯಿಲ್ಲ ಮರಕಟ್ಟದ ಪೇರ್ಗ್ಗೆರೆಯಿಲ್ಲ ಲೀಲೆಯಂ ।
ಮಾಡದ ದೇವತಾಭವನದಮಿಲ್ಲೊಲವಿಂ ಬಿಡದಗ್ರ್ರ ಹಾರಮಿ ।
ಲ್ಲಾಡಲದೇನೊ ಭೂ ಭುವನಭುಭುಕಮಾದುದು ಕೀರ್ತಿಂಭಾಪು ನಾ ।
ಪಾಡಿಯೆ ಸೈಪು ಮಾದರಸ ಸಾಯಣರೆಂಬ ಮಹಾಪ್ರಧಾನರಾ ॥[೨]

ಈ ಎರಡು ಶಾಸನಗಳಲ್ಲಿ ಉಲ್ಲೇಖವಾದಂತೆ ಮಧ್ಯಕಾಲೀನ ಕರ್ನಾಟಕದಲ್ಲಿ ನೀರಾವರಿ ವ್ಯವಸ್ಥೆಗಾಗಿ ಕೆರೆಯನ್ನು ಕಟ್ಟಿಸುವುದು ಮತ್ತು ಬಾವಿಗಳನ್ನು ತೋಡಿಸುವುದು ಅತಿ ಮುಖ್ಯವಾದ ಕೆಲಸವಾಗಿತ್ತು ಎಂಬುದು ದೃಢವಾಗುತ್ತದೆ. ಈ ಕಾರ್ಯಗಳನ್ನು ಮಾಡುವುದು ಅಂದಿನ ಸಾಮಾಜಿಕ ಹಾಗೂ ನೈತಿಕ ಜವಾಬ್ದಾರಿಯಾಗಿತ್ತು. ಶತ-ಶತಮಾನಗಳಿಂದ ಸತತವಾಗಿ ನಡೆದುಬಂದ ಈ ಕಾರ್ಯ ಆಧುನಿಕ ಇತಿಹಾಸದಲ್ಲಿ ಮುಂದುವರೆದಿರುವುದು ಗಮನಾರ್ಹವಾಗಿದೆ. ಆರಂಭದಿಂದ ಇಂದಿನವರೆಗೂ ನಿರ್ಮಾಣಗೊಂಡ ಕೆರೆ-ಬಾವಿಗಳ ನಿರ್ವಹಣೆ ಸರ್ಮಪಕವಾಗಿ ಬಳಕೆ ಆಗುತ್ತಾ ಬಂದಿದೆ. ಇಂತಹ ಕೆರೆ ಬಾವಿಗಳ ವ್ಯವಸ್ಥೆ ಕುರಿತು ಇತ್ತೀಚೆಗೆ ಅನೇಕ ಸಂಶೋಧನೆಗಳು ನಡೆಯುತ್ತಾ ಬಂದಿವೆ. ಆ ಹಿನ್ನೆಲೆಯಲ್ಲಿ ಹಾನಗಲ್ಲು ಪರಿಸರದ ಕೆರೆ ಮತ್ತು ಬಾವಿಗಳ ನಿರ್ಮಾಣ ಹಾಗೂ ನಿರ್ವಹಣೆ ಎಂಬ ವಿಷಯದ ಕುರಿತು ಸಂಶೋಧನಾ ಅಧ್ಯಯನ ಮುಖ್ಯವಾಗಿದೆ.

ಭೂಮಿಯ ಮೇಲೆ ಬಿದ್ದ ಮಳೆಯ ನೀರು ಇಳಿಜಾರು ಪ್ರದೇಶದತ್ತ ಹರಿದು ಹಳ್ಳಗಳಾಗುತ್ತವೆ. ಈ ಹಳ್ಳಗಳಿಗೆ ಅಡ್ಡವಾಗಿ ಮಣ್ಣಿನ ಕಟ್ಟೆ ಅಥವಾ ತಡೆಗೊಡೆಗಳನ್ನು ಕೃತಕವಾಗಿ ನಿರ್ಮಿಸಿ ಶೇಖರಣೆ ಮಾಡುವ ಪದ್ಧತಿ ಮಾನವನ ಉಗಮ ಮತ್ತು ವಿಕಾಸದ ಸುಧೀರ್ಘ ಇತಿಹಾಸದಲ್ಲಿ ಗಮನಿಸುತ್ತೇವೆ.[೩] ಈ ನೀರು ಸಂಗ್ರಹಿಸುವ ಪ್ರಮಾಣ ದೊಡ್ಡದಾಗಿದ್ದರೆ ಅದು 'ಜಲಾಶಯ' ವೆಂದು; ಅದು ಕಡಿಮೆ ಪ್ರಮಾಣದಲ್ಲಿ ಇದ್ದರೆ ಕೆರೆ ಅಥವಾ ಕಟ್ಟೆ ಎಂದು ಕರೆಯಲಾಗುತ್ತದೆ. ಇಲ್ಲಿ ಶೇಖರಣೆಗೊಂಡ ನೀರನ್ನು ಕುಡಿಯಲು ಬಳಸಲು ಮತ್ತು ಕಾಲುವೆಗಳ ಮುಖಾಂತರ ಕೃಷಿ ಚಟುವಟಿಕೆಗಳಿಗೆ ಉಪಯೋಗಿಸುವ ಪರಂಪರೆ ನಾಡಿನ ಚರಿತ್ರೆಯಲ್ಲಿ ಕಂಡುಬರುತ್ತದೆ.

ಈ ಪ್ರದೇಶದಲ್ಲಿ ಕಂಡುಬರುವ ಹೆಚ್ಚು ಕೆರೆಗಳು ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಮತ್ತು ವಿಜಯನಗರದ ಅರಸ ಮನೆತನದ ಕಾಲದಲ್ಲಿ ನಿರ್ಮಿಸಲಾದವುಗಳೆಂದು ಶಾಸನಗಳಿಂದ ತಿಳಿದುಬರುತ್ತದೆ. ಕಲ್ಯಾಣದ ಚಾಲುಕ್ಯರ ಕಾಲವನ್ನು ಕೆರೆಗಳ ಸುವರ್ಣಯುಗವೆಂದೆ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೪] ಚಾಲುಕ್ಯರ ಮಂಡಲಾಧಿಪತಿಗಳಾಗಿ ಹಾನಗಲ್ಲು ಪರಿಸರದಲ್ಲಿ ಕದಂಬರು ಕೂಡಾ ಕೆರೆಗಳನ್ನು ಕಟ್ಟಿಸಿರುತ್ತಾರೆ. ಈ ಭಾಗದಲ್ಲಿ ಲಭ್ಯವಾದ ೬೪ ಶಾಸನಗಳು ಜಲಸಂಗ್ರಹಗಳನ್ನು ನದಿ, ತೊರೆ, ಕೆರೆ, ಕಟ್ಟೆ, ಹಳ್ಳ, ಕೊಳ್ಳ, ಮಡವು, ದೊಣೆ, ಗುಂಡಿ, ತಟಾಕ, ತೀರ್ಥ, ಹೊಂಡ, ಕಾಲುವೆ, ಕುಂಟೆ, ಕೊಳಗಳೆಂದು ದಾಖಲಿಸಿವೆ.[೫]

ಭೌಗೋಳಿಕ ಹಾಗೂ ಸಣ್ಣ ಪುಟ್ಟ ಪರಿಸರ ಗುಡ್ಡ ಕಾಡುಗಳಿಂದ ಆವರಿಸಲ್ಪಟ್ಟ ಹಾನಗಲ್ಲು ಅರೆ ಮಲನಾಡು ಪ್ರದೇಶವಾಗಿರುತ್ತದೆ. ಇಲ್ಲಿ ಸುಮಾರು ೮೦೦ ಮಿಲಿ ಮೀಟರನಿಂದ ೧೬೦೦ ಮಿಲಿ ಮೀಟರನಷ್ಟು ಮಳೆ ಬಿಳುತ್ತದೆ. ಈ ಮಳೆ ನೀರಿನ ಪರ್ಯಾಯ ವ್ಯವಸ್ಥೆಯಾಗಿ ಕೆರೆ ಕಟ್ಟೆಯ ನಿರ್ಮಾಣ ಕಾರ್ಯ ಬಾವಿಗಳ ನಿರ್ಮಾಣದ ಅವಶ್ಯಕತೆ ಆಳ ಅರಸರು ಜನ ಸಮುದಾಯಕ್ಕೆ ಅವಶ್ಯಕತೆ ಉಂಟಾಗಿರಬೇಕು. ಅದಕ್ಕಾಗಿ ಈ ಪ್ರದೇಶದಲ್ಲಿ ೪೪೫ ಸಣ್ಣ ಕೆರೆಗಳು, ೧೧೨ ದೊಡ್ಡ ಕೆರೆಗಳು, ೫೨೦ ಕ್ಕೂ ಹೆಚ್ಚು ನೀರಾವರಿ ಬಾವಿಗಳು ಇದ್ದ ಬಗ್ಗೆ ಉಲ್ಲೇಖಿಸಲಾಗಿದೆ. ಹಾನಗಲ್ಲು ಪರಿಸರವು ಕೆರೆ ಕಟ್ಟೆ ನಿರ್ಮಾಣಕ್ಕೆ ಯೋಗ್ಯವಾದ ಭೌಗೋಳಿಕ ಲಕ್ಷಣಗಳನ್ನು ಒದಗಿಸಿದೆ. ಸಣ್ಣ ಪ್ರಮಾಣದ ಅರಣ್ಯ ಪ್ರದೇಶವಿದೆ.

ಮಾನವನು ಮೊದಲಿಗೆ ವ್ಯವಸಾಯವನ್ನು ಆರಂಭಿಸಿದಾಗ ನೈಸರ್ಗಿಕವಾದ ಮಳೆಯನ್ನು ಅವಲಂಬಿಸಿದ್ದನು. ಕೆಲವು ಸಂದರ್ಭದಲ್ಲಿ ಮಳೆ ಬಾರದೇ ಇದ್ದಾಗ. ನೀರನ್ನು ಸಂಗ್ರಹಿಸುವ ಪ್ರಯತ್ನದಲ್ಲಿ ತೊಡಗಿದನು. ಆ ಪ್ರಯತ್ನದ ಫಲವಾಗಿ ನಾಡಿನಾದ್ಯಂತ ಕೆರೆ, ಕಟ್ಟೆ, ಬಾವಿಗಳು ನಿರ್ಮಾಣಗೊಂಡವು. ಅವುಗಳಿಂದ ತನಗೆ ಬೇಕಾದಾಗ ನೀರಿನ ಬಳಕೆ ಮಾಡಿಕೊಳ್ಳತ್ತಿದ್ದನೆಂದು ನಮಗೆ ತಿಳಿದುಬರುತ್ತದೆ. ಇದು ನೈಸರ್ಗಿಕವಾಗಿ ಮಾನವನು ಅಳವಡಿಸಿಕೊಂಡ ಕ್ರಮವೆಂದೇ ತಿಳಿಯಲಾಗಿದೆ. ಇಂತಹ ಕೆರೆಗಳ ನಿರ್ಮಾಣ ವ್ಯವಸ್ಥೆ ಹಾನಗಲ್ಲ ಪರಿಸರದಲ್ಲಿಯೂ ಕಂಡು ಬರುತ್ತದೆ. ಅದರ ಕುರಿತು ಕ್ಷೇತ್ರ ಕಾರ್ಯ ಕೈಗೊಂಡು ಇಲ್ಲಿಯ ಸ್ಥಳೀಯ ಜನರಿಂದ ಮಾಹಿತಿ ಪಡೆದು ಶಾಸನಗಳನ್ನು ಬಳಸಿಕೊಂಡು "ಹಾನಗಲ್ಲು ಪರಿಸರದ ಕೆರೆ–ಬಾವಿಗಳ ಬಗ್ಗೆ" ಕಾಲಾನು ಕ್ರಮದಲ್ಲಿ ಈ ಕೆಳಗಿನಂತೆ ವಿವರಿಸಲಾಗಿರುತ್ತದೆ.

ಕನ್ನಡ ನಾಡಿನಲ್ಲಿ ಕೆರೆ ಕಟ್ಟಿಸುವ ಇತಿಹಾಸ ಕದಂಬರ ಪೂರ್ವದಿಂದಲೂ ಕಂಡುಬರುತಿದ್ದು, ಅದೇ ರೀತಿಯಾಗಿ ಹಾನಗಲ್ಲು ಪರಿಸರದಲ್ಲಿ ಮೌರ್ಯ ಶಾತವಾಹನರ ನೆಲೆಗಳು ಇಲ್ಲಿ ಕಂಡುಬಂದಿದ್ದು, ಕೆರೆ ನಿರ್ಮಾಣದ ಬಗ್ಗೆ ಸ್ಪಷ್ಟ ದಾಖಲೆಗಳು ಲಭ್ಯವಾಗಿರುವುದಿಲ್ಲ. ಆದರೆ ಕದಂಬರು ಈ ಪ್ರದೇಶದಲ್ಲಿ ಆಳಿರುವುದರಿಂದ ಆ ಕಾಲದ ಕೆರೆ ನಿರ್ಮಾಣದ ವ್ಯವಸ್ಥೆ ಅರಿತುಕೊಳ್ಳಲು ಸಾಧ್ಯವಾಗಿದೆ. ನಂತರ ಈ ಪ್ರದೇಶವನ್ನು ಆಳ್ವಿಕೆ ಮಾಡಿದ ರಾಷ್ಟ್ರಕೂಟರು ಕಲ್ಯಾಣದ ಚಾಲ್ಯುಕರು, ಕಲಚೂರಿಗಳು, ಯಾದವರು, ಹೊಯ್ಸಳರು, ವಿಜಯನಗರದ ಅರಸರು ಆದಿಲ್ ಶಾಹಿಗಳು, ಸವಣೂರಿನ ನವಾಬರು. ಕೆಳದಿ ಸಂಸ್ಥಾನ, ಸೋದೆ ಅರಸರು ಈ ಪ್ರದೇಶವನ್ನು ಆಳ್ವಿಕೆ ಮಾಡಿರುತ್ತಾರೆ. ಇವರ ಕಾಲದಲ್ಲಿ ಕೆರೆಗಳ ನಿರ್ಮಾಣ ನಿರ್ವಹಣೆಯ ಪರಂಪರೆ ನಿರಂತರವಾಗಿ

ಮುಂದುವರೆದುಕೊಂಡು ಬಂದಿದೆ. ಹಾನಗಲ್ಲು ಪರಿಸರದಲ್ಲಿ ಸಾಕಷ್ಟು ಕೆರೆಗಳು ನಿರ್ಮಾಣಗಳು ಕಂಡುಬಂದಿದ್ದು, ಈ ಕೆರೆಗಳನ್ನು ಕಟ್ಟಿದ್ದು ಯಾವಾಗ ಎಂಬುದು ತಿಳಿಯುವುದು ಕಷ್ಟವಾಗಿದೆ. ಉದಾಹರಣೆಯು ಹಾನಗಲ್ಲು ಆನೆಕೆರಿಯು ಕೆರೆಯ ವ್ಯಾಪ್ತಿ ೫೩೭ ಎಕರೆ ಪ್ರದೇಶವನ್ನು ಆವರಿಸಿದೆ. ಕೆರೆಯ ಏರಿಯನ್ನು ಒರಟಾದ ದುಂಡಗಲ್ಲು ಮತ್ತು ದೇವಾಲಯಕ್ಕೆ ಬಳಸಲಾದ ಕರಿಕಲ್ಲಿನ ಶಿಲೆಗಳಿಂದ ನಿರ್ಮಿಸಲಾಗಿದೆ. ಕೆರೆಯ ಸಂರಕ್ಷಣ ದೃಷ್ಟಿಯಿಂದ ಇದರ ಒಡ್ಡನ್ನು ಅಂಕು ಡೊಂಕಾಗಿ ರಚಿಸಲಾಗಿದೆ. ಇದರಿಂದ ನೀರಿನ ಒತ್ತಡ ಕಡಿಮೆ ಮಾಡುವ ವೈಜ್ಞಾನಿಕ ಮತ್ತು ನೈಸರ್ಗಿಕವಾದ ತಾಂತ್ರಿಕ ವ್ಯವಸ್ಥೆಯನ್ನು ರೂಪಿಸಕೊಂಡಿರುವುದು ತಿಳಿದುಬರುತ್ತದೆ. ಆಕಸ್ಮಿಕವಾಗಿ ಕೆರೆಯ ಕಟ್ಟೆ ಒಡೆದರು ಅದರ ದುರಸ್ತಿ ಕಾರ್ಯ ತ್ವರಿತವಾಗಿ ಕೈಗೊಳ್ಳುಲು ಅನುಕೂಲವಾಗುವ ತಂತ್ರಜ್ಞಾನವನ್ನು ಕೆರೆಯ ನಿರ್ಮಾಣದಲ್ಲಿ ಬಳಸಲಾಗಿದೆ. ಈ ಕೆರೆಯ ವ್ಯಾಪ್ತಿಯು ಪೂರ್ವದಿಂದ ಪಶ್ಚಿಮಕ್ಕೆ ೪ ಕಿಲೋ. ಮೀಟರ ಉದ್ದವಿದ್ದು ಕೆರೆಯ ಏರಿಯು ೧೫ ಅಡಿ ಎತ್ತರವಾಗಿದ್ದು, ರಸ್ತೆಯ ಅಗಲ ೨೦ ಅಡಿ ಅಗಲವಾಗಿದೆ.

ಈ ಕೆರೆಯಿಂದ ಹೆಚ್ಚಾದ ನೀರು ಹೋಗಲು ಪೂರ್ವ ದಿಕ್ಕಿನಲ್ಲಿ ಕೋಡಿ ಕಟ್ಟಿಸಲಾಗಿದೆ. ಈ ಕೆರೆಯ ಮಧ್ಯದಲ್ಲಿ ದೊಡ್ಡದಾದ ತೂಬು ಇದ್ದು ಈ ತೂಬಿನ ಮೂಲಕ ನೀರು ಹೊರ ಹೋಗುವ ವ್ಯವಸ್ಥೆ ಕಲ್ಪಿಸಲಾಗಿದೆ. ಈ ಕೆರೆಯ ನೀರಿನ ಪ್ರಮಾಣವನ್ನು ಅನುಸರಿಸಿ ಕೃಷಿ ವ್ಯವಸ್ಥೆಗೆ ಧನ ಕರುಗಳಿಗೆ ಹಾಗೂ ಜನರು ಕುಡಿಯಲು ಬಳಸಲು ನೀರನ್ನು ಬಿಡುವಂತೆ ವ್ಯವಸ್ಥೆಯನ್ನು ಅಳವಡಿಸಲಾಗಿದೆ. ಈ ತೂಬಿಗೆ ೧೮ನೇ ಶತಮಾನದಲ್ಲಿ ಬ್ರಿಟಿಷರ ಕಾಲದಲ್ಲಿ ಕಬ್ಬಿಣದ ನಿಯಂತ್ರಣ ಚಕ್ರ ಸಾಲಿನಿಂದ ಹರಿದು ಬರುವ ನೀರಿನ ಕಣಿವೆಗಳಿಗೆ ಅಡ್ಡವಾಗಿ ಅನೇಕ ಕಟ್ಟೆಗಳು ಅಥವಾ ಒಡ್ಡುಗಳನ್ನು ನಿರ್ಮಿಸಿ ಕೆರೆಗಳಾಗಿ ಬಳಕೆ ಮಾಡಿಕೊಳ್ಳುತ್ತಿರುವುದು ಇಂದಿಗೂ ಕಂಡುಬರುತ್ತದೆ. ಸ್ವಾತಂತ್ರ ನಂತರದ ಕಾಲದಲ್ಲಿ ಇವುಗಳ ನಿರ್ಮಾಣ ನಿರ್ವಹಣೆ ವ್ಯವಸ್ಥೆಯನ್ನು ಸರಕಾರ ಮತ್ತು ಸಮುದಾಯಗಳು ಮುಂದವರಿಸಿಕೊಂಡು ಬಂದಿರುವುದು ಕಾಣುತ್ತೇವೆ. ಈ ಪ್ರದೇಶದಲ್ಲಿ ಹರಿಯುವ ಧರ್ಮಾ ಮತ್ತು ವರದಾ ನದಿಗಳು ಹಾನಗಲ್ಲ ಪರಿಸರದ ಜನರ ವ್ಯವಸಾಯಕ್ಕೆ ವರದಾನವಾಗಿದೆ. ಇಲ್ಲಿಯ ಕೆರೆ ಭಾವಿಗಳನ್ನು ಸಮೀಕ್ಷ ಮಾಡಲಾಗಿ ಬಹುಪಾಲು ಕಲ್ಯಾಣದ ಚಾಲ್ಯುಕರು ಮತ್ತು ವಿಜಯ ನಗರದ ಅರಸರ ಕಾಲದ ಹೆಚ್ಚಾಗಿ ನಿರ್ಮಾಣಗೊಂಡಿರುವುದು ಸ್ಪಷ್ಟವಾಗುತ್ತದೆ.

ಪ್ರಸ್ತುತ ಪ್ರೌಢ ಪ್ರಬಂಧದ ಅಧ್ಯಯನಕ್ಕೆ ೨೦ ರಿಂದ ೨೫ ಕೆರೆಗಳನ್ನು ಪ್ರಧಾನವಾಗಿ ಇಟ್ಟುಕೊಂಡು ಚರ್ಚಿಸಲಾಗಿರುತ್ತದೆ.

**ಕೆರೆಗಳ ನಿರ್ಮಾಣ:**

ಕರ್ನಾಟಕದಲ್ಲಿ ಅತ್ಯಧಿಕವಾಗಿ ಕೆರೆ-ಬಾವಿಗಳು ಏಕೆ ನಿರ್ಮಾಣಗೊಂಡವು ಎಂಬ ಯೋಚನೆ ನಮ್ಮಲ್ಲಿ ಉದ್ಭವಿಸುತ್ತದೆ. ಇದಕ್ಕೆ ಉತ್ತರ ಹುಡುಕಲು ಹೋರಟಾಗ ಪ್ರಾಚೀನ ಕಾಲದಲ್ಲಿ ಮುಖ್ಯವಾಗಿ ಕ್ರಿ.ಶ. ಹತ್ತನೆಯ ಶತಮಾನದ ಹವಾಮಾನ ಪರಿಶೀಲಿಸಿದಾಗ, ಇತ್ತೀಚೆಗೆ ನಡೆಸಿದ ವೈಜ್ಞಾನಿಕ ಸಂಶೋಧನೆಗಳಿಂದ ಇಂದಿನ ಮತ್ತು ಮಧ್ಯಕಾಲೀನದ ವರ್ಷಗಳಲ್ಲಿ ಇದ್ದ ಹವಾಮಾನ ಒಂದೇ ಇತ್ತೆಂಬುದು ನಮಗೆ ತಿಳಿಯುತ್ತದೆ ೧೦ನೇ ಶತಮಾನ ಇಕಡೇ ಹಾನಗಲ್ಲ ಪರಿಸರದಲ್ಲಿ ಇಷ್ಟೊಂದು ಕೆರೆಗಳು ಏಕೆ ನಿರ್ಮಾಣವಾಗಿದೆ ಎಂದು ಸಂಶೋಧನೆ ಮೂಲಕ ತಿಳಿಯಬಹುದು.

ಹಾನಗಲ್ಲ ಪರಿಸರ ಬನವಾಸಿ ೧೨೦೦೦ ಸಾವಿರ ಆಡಳಿತ ವಿಭಾಗಕ್ಕೆ ಹಾನಗಲ್ಲು ೫೦೦ ಎಂಬ ಆಡಳಿತ ವಿಭಾಗವನ್ನು ಹೊಂದಿದೆ. ಅದರಂತೆ ಈ ಭಾಗದಲ್ಲಿ ಅತೀ ಹೆಚ್ಚು ಮಳೆಯು ಬೀಳುತ್ತಿತ್ತು. ಮತ್ತು ೧೦ನೇ ಶತಮಾನದಲ್ಲಿ ಈ ಭಾಗದಲ್ಲಿ ಅತಿಯಾದ ಅರಣ್ಯ ಸಂಪತ್ತು ಇದುದ್ದರಿಂದ ಮಳೆಯ ಪ್ರಮಾಣವು ಹೆಚ್ಚು ಇದ್ದು, ಇದರ ಪ್ರವಾಹವನ್ನು ತಗ್ಗಿಸಿ ಸಣ್ಣ ಸಣ್ಣ ಕೆರೆಗಳು ನಿರ್ಮಿಸಿದಂತೆ ಕಾಣುತ್ತದೆ. ಕ್ರಮೇಣ ಈ ಕೆರೆಗಳಿಗೆ ವ್ಯವಸ್ಥಿತವಾದ ರಚನೆಯನ್ನು ನೀಡಿ ಕೆರೆಗಳನ್ನು ನಿರ್ಮಿಸಿದರು. ಈ ನಿರ್ಮಾಣ ಕಾರ್ಯದಲ್ಲಿ ಆಳಿದ ರಾಜರುಗಳಾದ ಕದಂಬರು ಕಲ್ಯಾಣದ ಚಾಲುಕ್ಯರು, ಬಾದಾಮಿ ಚಾಲುಕ್ಯರ ಯಾದವರು ಕೈಜೋಡಿಸಿದರು. ಇದರಿಂದ ಈ ಭಾಗದಲ್ಲಿ ಸುಮಾರು ೯೩ಲಕ್ಕೂ ಹೆಚ್ಚು ಕೆರೆಗಳು ಮತ್ತು ೨೦೦ ಬಾವಿಗಳು ನಿರ್ಮಾಣಯಾಗಿದ್ದವು. ಇದರಿಂದ ಕರ್ನಾಟಕದಲ್ಲಿಯೇ ಅತೀ ಹೆಚ್ಚು ಕೆರೆಗಳನ್ನು ನಿರ್ಮಿಸಿದ ಕೀರ್ತಿ ಹಾನಗಲ್ಲ ಪರಿಸರಕ್ಕೆ ಸಿಗುತ್ತದೆ ಹಾವೇರಿ ಜಿಲ್ಲೆಗೆ ಭತ್ತದ ಕಣಜ ಯಾಲಕ್ಕಿ ನಗರ, ಎಲೆಯನಗರ, ಮೆಣಸಿಕಾಯಿ ನಗರದ ಜೊತೆಗೆ ಕೆರೆಗಳ ನಗರ ಎಂದು ಹೆಸರು ಬಂದಿದೆ.

ಈ ಪರಿಸರದಲ್ಲಿ ಕೆರೆಗಳ ನಿರ್ಮಾಣವನ್ನು ಸೂಕ್ಷ್ಮವಾಗಿ ಯೋಚಿಸಿದಾಗ ಈ ಮೇಲಿನ ಮಾಹಿತಿ ಹೇಳಿದಂತೆ ಹಾನಗಲ್ಲ ಪ್ರಾಚೀನ ಹಾನಗಲ್ಲು ೫೦೦ ವಿಭಾಗ ಆಗಿದ್ದು ಇಡಿ ಬನವಾಸಿ ೧೨೦೦೦ ಸಾವಿರಕ್ಕೆ ಮಾರುಕಟ್ಟೆಯಾಗಿದ್ದಿತು. ಇದರಿಂದ ಈ ಭಾಗದ ಮಾರುಕಟ್ಟೆಗೆ ಬರುವ ವಸ್ತುಗಳು ನೋಡಿದರೆ ಯಾಲಕ್ಕಿ, ಕಾಳಮೆಣಸು, ಕರಿಮೆಣಸು

ಭತ್ತವನ್ನು ಹೆಚ್ಚಾಗಿ ಬೆಳೆಯುತ್ತಿದ್ದುದು ತಿಳಿದುಬರುತ್ತದೆ. ಆದುದ್ದರಿಂದ ಈ ಬೆಳೆಗಳನ್ನು ಬೆಳೆಯಲು ನೀರಿನ ಅವಶ್ಯಕತೆ ಹೆಚ್ಚಿತ್ತೆಂಬ ಸಂಗತಿ ನೈಜವಾದುದಾಗಿದೆ.

ಒಂದು ಕೆರೆಯನ್ನು ನಿರ್ಮಾಣಮಾಡಬೇಕಾದರೆ ಕೆಲವು ಮುಖ್ಯವಾದ ವ್ಯವಸ್ಥೆಯನ್ನು ಅನುಸರಿಸಬೇಕಾಗುತ್ತದೆ ಒಂದು ಕೆರೆಯನ್ನು ನಿರ್ಮಿಸಬೇಕಾದರೆ ಮುಖ್ಯ ಭಾಗಗಳು ಈ ರೀತಿಯಾಗಿವೆ.

- ಜಲಾನಯನ ಪ್ರದೇಶ
- ಆಯಕಟ್ಟ ಮತ್ತು ಅಚ್ಚುಕಟ್ಟು ಪ್ರದೇಶ
- ಕೆರೆಯ ಏರಿ
- ಕಾಲುವೆ
- ಕೋಡಿ

**ಕಾಲುವೆಗಳು:**

ನೀರಾವರಿ ಕಾರ್ಯಗಳಿಗೆಂದು ನಿರ್ಮಿಸಲಾದ ಕೆರೆ ಹಾಗೂ ಇತರ ಮೂಲಗಳಿಂದ ನೀರನ್ನು ಹರಿಸುವ ಹಾಗೂ ನಾಲೆಗಳನ್ನು ರಕ್ಷಿಸುವುದು ಪ್ರಮುಖವಾದ ಕಾರ್ಯ. ಏಕೆಂದರೆ ಈ ಕಾಲುವೆಗಳ ಮೂಲಕವೇ ನೀರನ್ನು ಹರಿಸಿ ಬೆಳೆಗಳನ್ನು ಬೆಳೆಯಬೇಕಾಗಿದೆ ಕೆರೆ, ಬಾವಿ, ನದಿ ಹಳ್ಳಗಳ ನೀರು, ಈ ಕಾಲುವೆಗಳ ಮುಖಾಂತರ ಹರಿದಾಗ ಮಾತ್ರ ನೀರಾವರಿ. ಬೇಸಾಯಿ ಮಾಡಲು ಸಾಧ್ಯ. ಈ ಕಾಲುವೆಗಳು ಇರದೇ ಇದ್ದಲ್ಲಿ ನೀರಾವರಿ, ಮುಂದುವರೆಯಲಾರದು ಹೀಗಾಗಿ ನೀರನ್ನು ಸಂಗ್ರಹಿಸಿ ಅದರ ಸದುಪಯೋಗಕ್ಕೆ ಕಾಲುವೆಗಳ ನಿರ್ಮಾಣ ಅನಿವಾರ್ಯ, ಹೀಗೆ ಕೆರೆಗಳ ನಿರ್ಮಾಣದೊಂದಿಗೆ ಕಾಲುವೆ ಮತ್ತು ಸಾಗುವಳಿ ಭೂಮಿಯನ್ನು ಸಮನಾಗಿ ಮಾಡುವ ಕಾರ್ಯಗಳನ್ನು ಶಿಲಾಶಾಸನಗಳಲ್ಲಿ ವಿವರಿಸಲಾಗಿದೆ.

ಕ್ರಿ.ಶ. ೧೧೮೯– ಎರಡನೆಯ ತೈಲಪ ಹಾನಗಲ್ಲ ಆಡಳಿತವನ್ನು ಮಾಡುತ್ತಿದ್ದಾಗ ಕೆರೆಯ ಬೈಚವಳ್ಳಿಯ ತಂಗಾಳಿಯಕೆರೆ ಹರಿವಿನ ಸ್ಥಳಕ್ಕೆ ಅಡ್ಡಗಟ್ಟಿ ಹಾಕಿಸಿ ಕಾಲುವೆಗಳನ್ನು ತೋಡಿಸಿದರು ಎಂಬುದನ್ನು ಗುಡುಗಡಿಯ ಶಾಸನ ತಿಳಿಸುತ್ತದೆ.

ಆನೆಕೆರೆಯ ೮ ಉಪಕಾಲುವೆಗಳನ್ನು ಹೊಂದಿರುವದನ್ನು ಪ್ರಸ್ತುತದಲ್ಲಿ ಕಾಣಬಹುದಾಗಿದೆ. ಇದರ ಜೊತೆಗೆ ೪ ರಿಂದ ೫ ಉಪಕಾಲುವೆಗಳಿವೆ. ತಿಳಿವಳ್ಳಿಯ ದೊಡ್ಡ

ಕೆರೆಗೆ ಕಾಲುವೆಗಳು ೨ ಕಾಲುವೆಗಳು ವರದಾ ನದಿ ಹಾಗೂ ಧರ್ಮಾನದಿಯ ದೊಡ್ಡ ಕಾಲುವೆಯ ಹಾನಗಲ್ಲು ಪರಿಸರದ ೩೪ ಕೆರೆಗಳಿಗೆ ನೀರು ಹರಿಯುತ್ತದೆ.

೧೯೨೧ ರ ಬ್ರಿಟೀಷ ಸರಕಾರದ ವರದಿಯಂತೆ ೪೦೦ ವರ್ಷಗಳ ಕಾಲುವೆಯನ್ನು ದುರಸ್ತಿ ಮಾಡಿಸಿದವರ ಬಗ್ಗೆ ಉಲ್ಲೇಖವಿದೆ.

**ಜಲಾನದಿಯ ಪ್ರದೇಶ:**

ಈ ಪ್ರದೇಶವು ಸಾಮಾನ್ಯವಾಗಿ ಕೆರೆಯ ಭಾಗಕ್ಕೆ ಉತ್ತರದಲ್ಲಿರುತ್ತದೆ. ಸಾಮಾನ್ಯವಾಗಿ ಹಾನಗಲ್ಲು ಪರಿಸರದಲ್ಲಿ ಹೆಚ್ಚು ಮಳೆ ಬೀಳುತ್ತದೆ. ಇಲ್ಲಿ ಬೀಳುವ ಮಳೆಯ ನೀರು ಹರಿದು ಬಂದು ಕೆರೆಯನ್ನು ಸೇರುತ್ತದೆ ಉತ್ತರಕನ್ನಡ, ಶಿವಮೊಗ್ಗದ ಮಲೆನಾಡು ಪ್ರದೇಶದಲ್ಲಿ ಅಧಿಕವಾದ ಅರಣ್ಯವಿತ್ತು ಸಸ್ಯರಾಗಿ ಇವರಿಂದ ಎಲ್ಲೆಗಳು ನಡುವಿನ ಪ್ರದೇಶದಲ್ಲಿ ಮಣ್ಣಿನಲ್ಲಿ ಕೂಡ್ರಿಸಿಕೊಳ್ಳುತ್ತದೆ. ಕ್ರಮೇಣವಾಗಿ ಈ ಸ್ಥಳದಲ್ಲಿ ಕೋಡೀಕರಣಗೊಂಡ ನೀರು ಸಣ್ಣ ಝರಿಗಳಲ್ಲಿ ಹರಿದು ಕಾಲುವೆಗಳ ಮುಖಾಂತರ ಸಣ್ಣ ಸಣ್ಣ ಕಟ್ಟೆಯನ್ನು ತುಂಬಿಸಿ ಕೆರೆಯ ಪ್ರದೇಶಕ್ಕೆ ಬಂದು ಸೇರುತ್ತವೆ.

ಹಾನಗಲ್ಲು ಪರಿಸರದಲ್ಲಿ ಬರುವ ಎರಡು ನದಿಗಳು ಕರಾವಳಿ ಭಾಗ ಮತ್ತು ಮಲೆನಾಡು ಭಾಗದಲ್ಲಿ ಹುಟ್ಟಿರುವುದರಿಂದ ನದಿಯಿಂದ ಬಂದ ನೀರನ್ನು ತಳಭಾಗದ ಭೂಪ್ರದೇಶಗಳಿಗೆ ಹರಿಸಿ ಕೆರೆಗಳನ್ನು ಕಟ್ಟಿದ್ದಾರೆ. ಉದಾ: ಹೊಂಕಣ ಬಳಿಯ ಚಕ್ ಡ್ಯಾಂ ಶೇಷಗಿರಿಯ ಚಕ್ ಡ್ಯಾಂ ಕೂಡಲದ ಚಕ್ ಡ್ಯಾಂಗನ ಇವುಗಳ ಮುಖಾಂತರ ಕೆರೆಗೆ ಬಂದು ಸೇರುತ್ತದೆ. ಮಳೆ ಬೀಳುವ ಪ್ರದೇಶ ಮತ್ತು ಕೆರೆಗೆ ಹರಿದು ಬಂದು ಸೇರುವ ನೀರಿನ ಪ್ರಮಾಣಗಳು ಪರಸ್ಪರ ಸಂಬಂಧವನ್ನು ಹೊಂದಿರುತ್ತದೆ.

**ಕೆರೆಯ ತಳ :**

ಕೆರೆಯ ತಳ ಎಂದು ಗುರುತಿಸುವ ಭಾಗವು ಸಾಮಾನ್ಯ ಭೂಪ್ರದೇಶವಾಗಿದ್ದು ಇಲ್ಲಿ ನೀರು ಸಂಗ್ರಹಗೊಳ್ಳುತ್ತವೆ. ಈ ಭಾಗದಲ್ಲಿ ಸಣ್ಣ ಸಣ್ಣ ಕಟ್ಟೆಗಳಿಂದ ಹರಿದ ನೀರು ಬಂದಂತೆ ನೀರಿನ ಹರವು ವಿಸ್ತಾರಗೊಳ್ಳುವುದರೊಂದಿಗೆ ಕೆರೆಯು ತುಂಬುತ್ತಾ ಹೋಗುತ್ತದೆ.

**ಕೆರೆಗಳನ್ನು ನಿರ್ಮಿಸಲು ಅಗತ್ಯವಾದ ಅಂಶಗಳು :**

೧. ರಾಜನು ಸಂತೃಪ್ತನಾಗಿಯೂ, ಸಂತೋಷದಿಂದ ಕೂಡಿದವನಾಗಿಯೂ ಮತ್ತು ಆಚಂದ್ರಾರ್ಕವಾಗಿ ಹೆಸರು ಗಳಿಸಿಕೊಳ್ಳುವವನಾಗಿರಬೇಕು. ಅಂಥವನು ಕೆರೆಯ ನಿರ್ಮಾಣಕ್ಕೆ ತೊಡಗಿಕೊಳ್ಳಬೇಕು.

೨. ಜಲಶಾಸ್ತ್ರದಲ್ಲಿ (ಪಯಸ್ ಶಾಸ್ತ್ರದಲ್ಲಿ) ನೈಪುಣ್ಯತೆಯನ್ನು ಹೊಂದಿದ ಬ್ರಾಹ್ಮಣನು ಈ ಕಾರ್ಯದಲ್ಲಿ ತೊಡಗಬೇಕು.

೩. ಉತ್ತಮ ಜೇಡಿಮಣ್ಣು ಕೂಡಿರುವಂತಹ ಪ್ರದೇಶವನ್ನು ಕೆರೆ ಕಟ್ಟುವುದಕ್ಕೆ ಆಯ್ದುಕೊಳ್ಳಬೇಕು.

೪. ಬೆಟ್ಟಗಳ ಸಾಲುಗಳು ಇದ್ದಲ್ಲಿ ಅವುಗಳನ್ನು ಕೆರೆಯನ್ನು ನಿರ್ಮಿಸಲು ಉಪಯೋಗಿಸಿಕೊಳ್ಳಬೇಕು.

೫. (ಕರೆಯ ಪ್ರದೇಶದಲ್ಲಿ) ಸಮೀಪದಲ್ಲಿ ಫಲ ಕೊಡುವ ಭೂಮಿಯಿರಬೇಕು.

೬. ಕೆರೆಯ ನೀರಿನ ಹರವು ವಿಸ್ತೀರ್ಣವಾಗಿರಬೇಕು. ಹಾಗೆಯೇ ಆಳವಾಗಿಯೂ ಇರಬೇಕು.

೭. ಸಮೀಪದಲ್ಲಿಯೇ ಕಲ್ಲು ಗಣಿಗಳು ಇದ್ದು, ಅಲ್ಲಿ ಉದ್ದವಾದ ಮತ್ತು ಸಮನಾದ ಕಲ್ಲುಗಳು ದೊರೆಯಬೇಕು.

೮. (ಕೆರೆಯ) ತೂಬುಗಳಲ್ಲಿನ ಕಲ್ಲು ಅಥವಾ ನಿಯಂತ್ರಕಗಳು ಭದ್ರವಾಗಿರಬೇಕು ಮತ್ತು ನೀರಿನ ಒತ್ತಡದಿಂದ ಕಾಪಾಡುವಲ್ಲಿ ಸದೃಢವಾಗಿರಬೇಕು.[೬]

**ಅತೀ ಮುಖ್ಯವಾದ ಕೆಲವು ಮುನ್ನೆಚ್ಚರಿಕೆ ಕ್ರಮಗಳು :**

೧. ಕೆರೆಯಿಂದ ನೀರು ಸೋರಬಾರದು.

೨. ಕೆರೆಯ ಪಾತ್ರದಲ್ಲಿನ ಮಣ್ಣು ಉಪ್ಪಿನಂಶದಿಂದ ಕೂಡಿರಬಾರದು.

೩. ಎರಡು ರಾಜ್ಯಗಳ ನಡುವಿನ ಗಡಿ ಪ್ರದೇಶವನ್ನು ಆಯ್ಕೆ ಮಾಡಬಾರದು.

೪. ಕೆರೆಯ ಮಧ್ಯಭಾಗವನ್ನು (ಕೂರ್ಮ ಪ್ರದೇಶ) ಗಮನಿಸಬೇಕು. ಅವು ಎತ್ತರ ಅಥವಾ ಉಬ್ಬಾಗಿರಬಾರದು.

೫. ಅತ್ಯಲ್ಪ ನೀರು ಬರುವ ಪ್ರದೇಶವನ್ನು ಆಯ್ಕೆ ಮಾಡಬಾರದು ಮತ್ತು ಅತೀ ಹೆಚ್ಚು ಆಯಕಟ್ಟು ಇರುವ ಜಾಗವನ್ನು ಆರಿಸಬಾರದು.[೭]

ಕೆರೆಗಳನ್ನು ನಿರ್ಮಿಸುವುದಕ್ಕೆ ಕಲ್ಲು, ಕಲ್ಲಿನ ತೂಬು, ಇಟ್ಟಿಗೆ, ಸುಣ್ಣ ಮತ್ತು ಗಾರೆ ಮುಂತಾದ ಸಾಮಗ್ರಿಗಳನ್ನು ಬಳಸುತ್ತಿದ್ದರು ಎಂದು ಶಾಸನವು ತಿಳಿಸುತ್ತದೆ. ಕಲ್ಲು ಎಂದರೆ ಸಾಮಾನ್ಯವಾಗಿ ಉರುಟು(ಒರಟು) ಕಲ್ಲು ಎಂದು ಪರಿಗಣಿಸಬೇಕು. ಇವುಗಳಲ್ಲದೇ ಮಣ್ಣು ಸಹ ಉಪಯೋಗಿಸುತ್ತಿದ್ದರು ಎಂಬುದು ನಿಸ್ಸಂಶಯವಾದ ಸಂಗತಿ.

ಕೆರೆಗಳು ವಿವಿಧ ಆಕಾರಗಳನ್ನು ಹೊಂದಿರುತ್ತಿದ್ದವು. ಕೆರೆಗಳ ಆಕಾರವು ಬಹುತೇಕವಾಗಿ ಭೌಗೋಳಿಕವಾಗಿ ಪರಿಸರವನ್ನು ಅವಲಂಬಿಸಿರುತ್ತಿದ್ದವು. ಚಕ್ರಪಾಣಿ ಮಿಶ್ರನ ವಿಶ್ವವಲ್ಲಭ ಕೃತಿಯು ವಿವಿಧ ಆಕಾರದ ಕೆರೆಗಳನ್ನು ಪ್ರಸ್ತಾಪಿಸುತ್ತದೆ. ಅವುಗಳಲ್ಲಿ ವೃತ್ತಾಕಾರ, ಚತುಷ್ಕೋನ, ಬಹುಕೋನಾಕೃತಿ, ಲಂಬಾಕಾರ, ಅರ್ಧಚಂದ್ರಾಕಾರಗಳು ಮತ್ತು ಆಯತಾಕಾರಗಳು ಸೇರಿವೆ. ಕಶ್ಯಪನು ಕೃಷಿ ಸೂಕ್ತಿಯಲ್ಲಿ ವೃತ್ತ ಲಾಭ ಮತ್ತು ಅರ್ಧಚಂದ್ರಾಕಾರಗಳಲ್ಲಿ ಕೆರೆಯ ಆಕಾರವು ಇರಬಹುದೆಂದು ತಿಳಿಸುತ್ತಾನೆ.[೮]

**ಕೆರೆಗಳ ನಿರ್ಮಾಣ ಮತ್ತು ತಾಂತ್ರಿಕತೆ :**

ಕೆರೆಗಳ ನಿರ್ಮಾಣದಲ್ಲಿ ನಮ್ಮ ಪೂರ್ವಿಕರು ಅಳವಡಿಸಿಕೊಂಡಿರುವ ವಿಧಾನಗಳ ಬಗ್ಗೆ ನಮಗೆ ಸಿಗುವ ಮಾಹಿತಿ ಬಹುಮಟ್ಟಿಗೆ ಇಲ್ಲವೇ ಇಲ್ಲ ಎನ್ನಬಹುದು. ಅವರು ಕಟ್ಟೆಯ ಎರಡು ಕಡೆಯ ಇಳಿಜಾರುಗಳನ್ನು ಯಾವ ಸೂತ್ರವನ್ನು ಅವಲಂಬಿಸಿ ನಿರ್ಮಿಸುತ್ತಿದ್ದರು. ಕೋಡಿಯನ್ನು ನಿರ್ಮಿಸುವಾಗ ಯಾವ ಅಂಶವನ್ನು ಅನುಸರಿಸುತ್ತಿದ್ದರು. ಈ ಬಗೆಯ ಪ್ರಶ್ನೆಗಳಿಗೆ ನಮಗೆ ಯಾವ ಉತ್ತರವೂ ಸಿಗುವುದಿಲ್ಲ. ನಮ್ಮ ಪೂರ್ವಿಕರು ಯಾವ ಲಿಖಿತ ದಾಖಲೆಗಳನ್ನು ಇಟ್ಟಿರುವುದಿಲ್ಲ. ಅಲ್ಪ ಸ್ವಲ್ಪ ಈ ವಿಷಯವಾಗಿ ನಮಗೆ ಮಾಹಿತಿ ಸಿಗುವುದು 'ಪೌರ ಮಾಮಲ ಶಾಸನ'ದಿಂದ. ಪೌರಮಾಮಿಲ ಇರುವುದು ಆಂಧ್ರಪ್ರದೇಶದ ಕಡಪ ಜಿಲ್ಲೆಯ ಒಡವೇಲು ತಾಲ್ಲೂಕಿನಲ್ಲಿ ಕೆರೆಯ ಹೆಸರು "ಅನಂತಸಾಗರ" ಇದನ್ನು ಕಟ್ಟಿದ್ದು ೧೪ನೇ ಶತಮಾನದಲ್ಲಿ ವಿಜಯನಗರ ಅರಸರ ಆಳ್ವಿಕೆಯಲ್ಲಿ. ಈ ಶಾಸನದಿಂದ ನಮಗೆ ತಿಳಿಯುವ ಮುಖ್ಯ ಅಂಶವೆಂದರೆ ಕೆರೆಕಟ್ಟಲು ಮುಖ್ಯವಾಗಿ ಕಟ್ಟೆಯ ಭದ್ರವಾದ ಬುನಾದಿ ಮತ್ತು ಕೆರೆಯ ಅಂಗಳ ನೀರು ಸೋರಿ ಹೋಗದಿರುವಂತಹ ಭೂಮಿಯಾಗಿರಬೇಕೆಂಬುದರ ಬಗ್ಗೆ ಮಹತ್ವವನ್ನು ನೀಡಿರುವುದು. ಈ ಅಂಶಗಳು ಇಂದಿಗೂ ಸಹ ಗಮನಾರ್ಹ

ಅಂಶವಾಗಿವೆ. ಕೆರೆ ಜಲಾಶಯಗಳ ನಿರ್ಮಾಣದಲ್ಲಿ ಇದರಿಂದ ನಮಗೆ ತಿಳಿಯುವುದೇನೆಂದರೆ ನಮ್ಮ ಪೂರ್ವಿಕರು ಕೆರೆ ನಿರ್ಮಾಣದಲ್ಲಿ ವೈಜ್ಞಾನಿಕ ದೃಷ್ಟಿಯನ್ನು ಹೊಂದಿದ್ದರು.

ಈ ಕಾಲದಲ್ಲಿ ಸುಲಭವಾಗಿ ಸಿಗುತ್ತಿದ್ದ ಮಣ್ಣು, ಕಲ್ಲನ್ನು ಉಪಯೋಗಿಸಿಯೇ ಎಲ್ಲ ಕೆರೆಗಳ ನಿರ್ಮಾಣವು ನಡೆಯುತ್ತಿತ್ತು. ಅಲ್ಲದೆ ಬೃಹತ್ ಜಲಾಶಯಗಳನ್ನು ಕಟ್ಟುವ ಅವಶ್ಯಕತೆಯೇ ಅವರಿಗೆ ಇರಲಿಲ್ಲ. ಪ್ರತಿಯೊಂದು ಗ್ರಾಮವು ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿರುತ್ತಿತ್ತು. ಆದ್ದರಿಂದ ಅಂದಿನ ಕೆರೆ ತಮ್ಮ ಗ್ರಾಮಕ್ಕೆ ಸೀಮಿತವಾಗಿರುತ್ತಿದ್ದವು.[5]

**ಕೆರೆ ನಿರ್ಮಾಣದ ಉದ್ದೇಶ :**

"ಕೆರೆಯಂ ಕಟಿಸು ಭಾವಿಯಂ ಸವೆಸು ದೇವಾಗಾರಮಂ ಮಾಡಿಸು ಜ್ಜೆರೆಯಾಳ್ ಸಿರಿದನಾಥರಂ ಬಿಡಿಸುವ ಮಿತ್ರರ್ಗಿಂಬುಕೆಯ್ ನಂಬದರ್ಗೆರೆ ವಟ್ಟಾಗಿರು ಶಿಷ್ಟರಂ ಪೊರೆಯನ್ನುತ್ತಿಂತೆಲ್ಲವಂ ಪಿಂದೆತಾ. ಯೆಂದಳ್ವಾಲೆರೆವಂದು ತೊಟ್ಟು ಕಿವಿಯಾಳ್ ಲಕ್ಷ್ಮೀದರಾ ಮಾತ್ಯನಾ"

ತಾಯಿ ಹಾಲನೀಯುವಾಗ ಕಂದನಿಗೆ ಕಿವಿಯಲ್ಲಿ ಹೇಳುವ ಈ ಪಿಸುಮಾತು ಹಿಂದಿನವರು ತಮ್ಮ ಜೀವನದಲ್ಲಿ ಪಾಲಿಸಬೇಕಾದ ನಿಯಮಗಳಾಗಿವೆ. ಇವುಗಳಲ್ಲಿ ಕೆರೆ ಬಾವಿಗಳ ನಿರ್ಮಾಣವು ಪ್ರಥಮ ಪ್ರಾಶಸ್ತ್ಯದಲ್ಲಿ ಸೇರಿರುವುದು ವಿಶೇಷವಾದುದು. ಇದರಿಂದ ಅಂದಿನ ಪರಿಸ್ಥಿತಿಯಲ್ಲಿ ಕೆರೆಬಾವಿಗಳ ನಿರ್ಮಾಣವು ಹೆಚ್ಚಿನ ಮಹತ್ವ ಹೊಂದಿದ್ದು ಸ್ಪಷ್ಟವಾಗುತ್ತದೆ.

**ಸಾಮಾನ್ಯ ಸಂರಕ್ಷಣಾ ಕ್ರಮಗಳು :**

೧. ಕೆರೆ ಅಂಗಳ ಹಾಗೂ ನಾಲೆಯ ತಳದಿಂದ ಕಾಲಕಾಲಕ್ಕೆ ಹೂಳು ತೆಗೆಯುವುದು.

೨. ಮಳೆಯಿಂದಾಗಲಿ ಇತರ ಕಾರಣಗಳಿಂದಾಗಲಿ ಮಣ್ಣು ಕಟ್ಟೆಗೆ ಎಲ್ಲಿಯಾದರೂ ಹಾನಿಯಾಗಿದ್ದ ಮಣ್ಣು ಕೆಲಸ ಮಾಡಿ ಪ್ರದೇಶ ಸರಿಪಡಿಸುವುದು.

೩. ತೂಬು ಕೋಡಿಗಳಿಗೆ ಏನಾದರೂ ಹಾನಿಯಾಗಿದ್ದರೆ ಕಾಲಕಾಲಕ್ಕೆ ಅದನ್ನು ದುರಸ್ಥಿ ಮಾಡುವುದು.

೪. ಜಲಾಯನ ಪ್ರದೇಶ ಒತ್ತುವರಿಯಾಗದಂತೆ ನೋಡಿಕೊಳ್ಳುವುದು.

೫. ಕೆರೆಯ ಆಳಕ್ಕೆ ಹರಿದು ಬರುವ ಹೂಳನ್ನು ತಡೆಯಲು ವ್ಯವಸ್ಥೆ ಮಾಡುವುದು.

**ವಿದೇಶಿ ಬರಹಗಾರರು ಕಂಡಂತೆ ಕೆರೆ ಮತ್ತು ನೀರಾವರಿ ನಿರ್ವಹಣೆ :**

ಮಧ್ಯಕಾಲೀನ ಕರ್ನಾಟಕದಲ್ಲಿ ನೀರಾವರಿ ಬೆಳೆಗಳನ್ನು ಕುರಿತು ಬ್ರಿಟನ್ನಿನ ಫ್ರಾನ್ಸಿಸ್ ಬುಖಾನನರದರು ಕ್ರಿ.ಶ.೧೮೧೦ ರಲ್ಲಿ ಕರ್ನಾಟಕದಲ್ಲಿ ಕರಾವಳಿ ಮಲೆನಾಡು ಮತ್ತು ಬಯಲು ಸೀಮೆಗಳಲಿ ಸುದೀರ್ಘ ಪ್ರಯಾಣ ಮಾಡಿ ಪ್ರತ್ಯಕ್ಷದರ್ಶಿಯಾಗಿ ಆದ ಅನುಭವಗಳನ್ನು ತಮ್ಮ ಸರ್ವೇಕ್ಷಣಾ ವರದಿಯಲ್ಲಿ ವಿವರಿಸಿದ್ದಾರೆ. ಬುಖಾನನರವರು ನೀಡಿರುವ ಮಾಹಿತಿಗಳು ಕ್ರಿ.ಶ. ೧೮೧೦ ಕ್ಕೆ ಸಂಬಂಧಿಸಿದ್ದರೂ ಸಹ ಕೃಷಿ ಕ್ಷೇತ್ರಕ್ಕೆ ಸಂಬಂಧಪಟ್ಟ ಪದ್ಧತಿಗಳು ಹಲವು ಶತಮಾನಗಳಿಂದಲೂ ಅವಿರತವಾಗಿ ಮುಂದುವರೆದು ಬಂದಿರುವುದನ್ನು ಪರಿಗಣಿಸಬಹುದು.

ಕನಾಟಕದ ಕರಾವಳಿ ಪ್ರದೇಶದಿಂದ ಪ್ರವಾಸ ಆರಂಭಿಸಿದ ಕುಖಾನನರವರು ಕಾರವಾರ, ಸಿರ್ಸಿ, ಮಲೆನಾಡಿ ಕೆಳದಿ, ಇಕ್ಕೇರಿ, ಹೈದ್‌ನಗರ, ಕವರ್ಲೆದುರ್ಗ, ತೀರ್ಥಹಳ್ಳಿ, ಮಮಡಗದ್ದೆ, ಶಿವಮೊಗ್ಗ, ಕೂಡ್ಲಿ ಪ್ರದೇಶಗಳಲ್ಲಿ ಪ್ರಯಾಣ ಮುಂದುವರೆಸಿ ಬಯಲು ಸೀಮೆ ಪ್ರದೇಶಗಳಾದ ಮಲೆಬೆನ್ನೂರ, ಹರಿಹರ, ಚಿತ್ರದುರ್ಗ, ಹಿರಿಯೂರು, ಹಳೇಬೀಡು, ಬೇಲೂರು, ಶ್ರವಣಬೆಳಗೊಳ, ಶ್ರೀರಂತ ಪಟ್ಟಣಗಳ ಮುಖಾಂತರ ಮದ್ರಾಸಿಗೆ ಪ್ರಯಾಣ ಬೆಳೆಸಿ ಮಾರ್ಗದ ಉದ್ದಕ್ಕೂ ತಾವು ಕಂಡಿರುವ ಕೃಷಿ, ಹವಾಮಾನ, ನಿಸರ್ಗ, ಜನಜೀವನ ಹಾಗೂ ಸಾಮಾಜಿಕ, ಧಾರ್ಮಿಕ ಸಾಂಸ್ಕೃತಿಕ ಅಧ್ಯಯನದ ಮಹತ್ವವನ್ನು ವಿವರಿಸಿದ್ದಾರೆ.

ಶಿವಮೊಗ್ಗದ ಮಾರ್ಗವಾಗಿ ಪ್ರಯಾಣ ಮುಂದುವರೆಸಿದ ಫ್ರಾನ್ಸಿಸ್ ಬುಖಾನನರವರು ಕೂಡ್ಲಿ, ಸಾಸಿವೆಹಳ್ಳಿ, ಮಲೆಬೆನ್ನೂರ, ಹರಿಹರ, ಆನೆಗೊಂದಿ, ಚಿತ್ರದುರ್ಗ, ಹಿರಿಯೂರುಗಳಿಗೆ ಭೇಟಿ ನಿಡಿ ನೀರಾವರಿ ಮತ್ತು ಕೃಷಿ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಪ್ರತ್ಯಕ್ಷದರ್ಶಿಯಾಗಿ ಅವರ ವಿಚಾರಗಳನ್ನು ಹಂಚಿಕೊಂಡಿದ್ದಾರೆ. ಕೃಷಿಗೆ ಯೋಗ್ಯವಲ್ಲದ ಚಿತ್ರದುರ್ಗ ಮತ್ತು ಸುತ್ತಮುತ್ತಲಿನ ಭೂಮಿಯು ಗಟ್ಟಿಯಾದ ಎರೆಮಣ್ಣನ್ನು ಹೊಂದಿದ್ದು, ಬಹುತೇಕ ನಿರುಪಯುಕ್ತವಾಗಿದೆ. ಈ ಭಾಗದಲ್ಲಿ ಬಳಸುವ ಬೃಹದಾಕಾರದ ಮರದ ನೇಗಿಲು ಎಳೆಯಲು ೮ ರಿಂದ ೧೦ ಎತ್ತುಗಳನ್ನು ಬಳಸಲಾಗುತ್ತಿತ್ತು. ಇಲ್ಲಿಯ ಪ್ರಮುಖ ಕೆರೆಗಳಲ್ಲಿ ಇಮಂಗಳ ಕೆರೆ ಒಂದಾಗಿದ್ದು, ಮಳೆಗಾಲದಲ್ಲಿ ಮಾತ್ರ ನೀರು ಸಂಗ್ರಹವಾಗುತ್ತಿತ್ತು. ಬೇಸಿಗೆಯಲ್ಲಿ ಒಣಗಿರುತ್ತದೆ. ನೀರಾವರಿ ಸೌಲಭ್ಯಗಳಿಂದ ವಂಚಿತವಾದ ಹಿರಿಯೂರಿನಲ್ಲಿ ಒಣಬೇಸಾಯದ ಬೆಳೆಗಳಾದ ಹುರುಳಿ, ನವಣಿ, ಗೋಧಿ, ಎಳ್ಳು, ರಾಗಿ, ಹಾಗೂ ಅಲ್ಪ ಪ್ರಮಾಣದಲ್ಲಿ ಭತ್ತವನ್ನು ಬೆಳೆಯಲಾಗುತ್ತಿತ್ತು ಎಂದು ತಮ್ಮ ವರದಿಯಲ್ಲಿ ತಿಳಿಯಪಡಿಸಿದ್ದಾರೆ.

ಬುಖಾನನ ವರದಿಯಂತೆ ಮಾರಿ ಕಣಿವೆ ಪ್ರದೇಶದಲ್ಲಿ ನದಿಗೆ ೫೦೦ ಗಜಗಳ ಅಂತರದಲ್ಲಿ ಎರಡು ಬೆಟ್ಟಗಳನ್ನು ಸೇರಿಸಿ, ಆಣೆಕಟ್ಟೆ ನಿರ್ಮಿಸಿದಲ್ಲಿ ಪೂರ್ತಿಯಾಗಿ ಹಿರಿಯೂರು ಪ್ರದೇಶ ನೀರಾವರಿಯಾಗುತ್ತದೆ. ಬೃಹತ್ ಪ್ರಮಾಣದ ಬೆಲಗೂರು ಸರೋವರ ಅಥವಾ ಕೆರೆಯಲ್ಲಿ ಹೂಳು ತುಂಬಿದ್ದ ಬೇಸಿಗೆಯಲ್ಲಿ ಹೂಳು ತೆಗೆದು ಜಮೀನಿಗೆ ಉತ್ತಮ ಗೊಬ್ಬರವಾಗಿ ಬಳಸಿದರೆ, ಕೆರೆಯ ದುರಸ್ತಿಯನ್ನು ಅತೀ ಕಡಿಮೆ ವೆಚ್ಚದಲ್ಲಿ ಮಾಡಬಹುದು. ಹಾಗೂ ಜಮೀನಿನ ಫಲವತ್ತತೆಯೂ ಹೆಚ್ಚಿದಂತಾಗುತ್ತದೆ ಎಂದು ತಮ್ಮ ವರದಿಯಲ್ಲಿ ತಿಳಿಸಿರುವುದು ಕಂಡು ಬರುತ್ತದೆ.[೧೦]

**ಬುಖಾನನ ಕಂಡಂತೆ ಕೆರೆ ನೀರು ನಿರ್ವಹಣೆ :**

ಬುಖಾನನನು ತನ್ನ ಸುದೀರ್ಘ ಪ್ರಯಾಣದ ಅನುಭವದ ಹಿನ್ನೆಲೆಯಲ್ಲಿ ಮೂರು ವಿಧದ ಕೆರೆಗಳನ್ನು ಗುರುತಿಸಿದ್ದಾನೆ.

- ಜಾನುವಾರುಗಳಿಗೆ ಕುಡಿಯುವ ನೀರಿಗಾಗಿ ನಿರ್ಮಿಸಲ್ಪಟ್ಟ ಚಿಕ್ಕ ಸರೋವರವನ್ನೇ ಕಟ್ಟೆ ಎಂದು ಕರೆಯಲಾಗಿದೆ.
- ಕೃಷಿ ಭೂಮಿಗೆ ನೀರುಣಿಸುವ ದೊಡ್ಡ ಸರೋವರವನ್ನೇ ಕೆರೆ ಎನ್ನಲಾಗಿದೆ.
- ಆದರೆ ಬುಖಾನನು ತಿಳಿಸುವ ಕುಂಟೆ ಎನ್ನುವ ಚೌಕಾಕಾರದ ಕರೆಯ ಅಸ್ತಿತ್ವದ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳಿವೆ.

ಕೆರೆಗಳನ್ನು ಅವುಗಳ ನೀರು ಪೂರೈಕೆಯ ಮೂಲಗಳಿಗೆ ಅನುಗುಣವಾಗಿ ಎರಡು ವಿಧಗಳಾಗಿ ಬುಖಾನನು ವಿಂಗಡಿಸಿದ್ದು ಅವುಗಳೆಂದರೆ ಒಂದು ನದಿ ನೀರು ಆಧಾರದ ಕೆರೆಗಳು ಮತ್ತು ಎರಡನೇಯದಾಗಿ ಮಳೆ ನೀರು ಆಧಾರಿತ ಕೆರೆಗಳು.

ನದಿಗೆ ಆಣೆಕಟ್ಟೆ ನಿರ್ಮಿಸಿ, ಆ ಮೂಲಕ ರಚನೆಯಾಗಿರುವ ಕೆರೆಗಳನ್ನು ನದಿ ಆಧಾರಿತ ಕೆರೆಗಳು ಎನ್ನಲಾಗಿದೆ. ಹಲವಾರು ಸರೋವರಗಳು ಮಳೆಯ ನೀರಿನಿಂದ ನಿರ್ಮಾಣಗೊಂಡಿರುವ ಕರೆಯನ್ನು ಮಳೆ ಆಧಾರಿತ ಕೆರೆ ಎನ್ನಲಾಗಿದೆ. ಬುಖಾನನರವರು ಸುಧೀರ್ಘ ಪ್ರಮಾಣದಲ್ಲಿ ಗಮನಿಸಿರುವಂತೆ ಕರ್ನಾಟಕದ ಬಹುತೇಕ ಕೆರೆಗಳು ಈ ಮಾದರಿಯಲ್ಲಿಯೇ ನಿರ್ಮಾಣಗೊಂಡಿವೆ.[೧೧]

**ಕೆರೆ ನೀರು ನಿರ್ವಹಣೆ :**

ಫ್ರಾನ್ಸಿಸ್ ಬುಖಾನನ್‌ರವರು ಕಂಡಂತೆ ಪ್ರತಿ ವರ್ಷ ರೈತರು ಜೂನ್ ತಿಂಗಳಿನಲ್ಲಿ ತಮ್ಮ ಕೆರೆಗಳ ನೀರು ಸಂಗ್ರಹಣೆಯನ್ನು ಪರಿಗಣಿಸಿ ತಾವು ಬೆಳೆಯಬಹುದಾದ ಬೆಳೆಗಳನ್ನು ನಿರ್ಧರಿಸುತ್ತಿದ್ದರು. ನೀರಿನ ಸಂಗ್ರಹಣೆ ಕಡಿಮೆ ಇದ್ದಲ್ಲಿ ರಾಗಿ ಮತ್ತು ಜೋಳದ ಬೆಳೆಗಳನ್ನು ಬೆಳೆಯುತ್ತಿದ್ದರು. ಆದರೆ, ಅದೇ ಭೂಮಿಯಲ್ಲಿ ನೀರಿನ ಸಂಗ್ರಹಣೆಯನ್ನು ಪರಿಗಣಿಸಿ ಎರಡನೇ ಬೆಳೆಯಾಗಿ ಸಾಧ್ಯವಿರವಷ್ಟು ಭೂಮಿಯಲ್ಲಿ ಭತ್ತದ ಬೆಳೆ ಬೆಳೆಯುತ್ತಿದ್ದರು. ಭತ್ತದ ಭೂಮಿಯು ಇಳಿಜಾರಿನ ಹಾಗೂ ಸಮತಟ್ಟಾದ ಪ್ರದೇಶವಾಗಿದ್ದು, ಸುತ್ತಲೂ ಬದುಗಳಿಂದ ಕೂಡಿರುತ್ತದೆ. ಕೃತಕ ಕಾಲುವೆಗಳಿಂದ ಕೆರೆ ನೀರನ್ನು ಹೊಲಗಳಿಗೆ ಬಳಸಲಾಗುತ್ತಿತ್ತು.

ಕೆರೆಯ ನೀರನ್ನು ಹೊಲಗಳಿಗೆ ಬಳಸಲು ಚಿಕ್ಕದಾದ ವಿತರಣಾ ಕಾಲುವೆಗಳನ್ನು ನಿರ್ಮಿಸುತ್ತಿದ್ದು, ಕೆರೆ ನಿರ್ಮಾಣ ಮಾಡಿಸಿದವರೇ ಮುಖ್ಯ ಕಾಲುವೆಗಳನ್ನು ನಿರ್ಮಿಸುತ್ತಿದ್ದು, ಅಂತಹ ಕಾಲುವೆಗಳು ಬೇರೆ ಬೇರೆ ರೈತರ ಕೃಷಿ ಭೂಮಿಯಲ್ಲಿ ಹಾದು ಹೋಗುತ್ತವೆ. ಕಬ್ಬಿನ ಬೆಳೆಯ ನಿರ್ವಹಣೆಯಲ್ಲಿ ನೀರಿನ ಹಂಚಿಕೆಯನ್ನು ರೇಖಾ ಚಿತ್ರದೊಂದಿಗೆ ವಿವರಿಸಿರುವ ಬುಖಾನನ್ ಪ್ರಕಾರ ಮುಖ್ಯ ಕಾಲುವೆಯಿಂದ ೨೨ ಅಡಿ ಅಂತರದಲ್ಲಿ ವಿತರಣಾ ಕಾಲುವೆಗಳನ್ನು ರಚಿಸಲಾಗಿದ್ದು, ಕೆಲವೊಮ್ಮೆ ಹೆಚ್ಚುವರಿ ನೀರನ್ನು ಒಣಗಿಸಲು ವಿತರಣಾ ಕಾಲುವೆಗಳಿಗಿಂತಲೂ ಆಳವಾದ ಕಾಲುವೆಗಳನ್ನು ನಿರ್ಮಿಸಲಾಗುತ್ತಿತ್ತು. ಈ ರೀತಿಯ ಆಳವಾದ ಕಾಲುವೆಗಳು ಪುನಃ ಮುಖ್ಯ ಕಾಲುವೆಗಳಿಗೆ ಸಂಪರ್ಕಹೊಂದಿದ್ದವು.

ಪ್ರತ್ಯಕ್ಷದರ್ಶಿಯಾಗಿ ಬುಖಾನನ್‌ರವರು ಬರೆದಿರುವಂತಹ ವರದಿಯು ಕ್ರಿ.ಶ. ೧೮ನೇ ಶತಮಾನ ಹಾಗೂ ಅದಕ್ಕೂ ಪೂರ್ವದ ಹಲವು ಶತಮಾನಗಳ ದಕ್ಷಿಣ ಭಾರತದ ಹಾಗೂ ಸಂಪ್ರದಾಯ ಬದ್ಧವಾದ ಕೃಷಿ ಪದ್ದತಿಯನ್ನು ವಿವರಿಸುವ ಕೈಪಿಡಿಯಾಗಿದೆ. ಬುಖಾನನ್‌ರವರು ತಿಳಿಸುವ ಕೃಷಿ ಕ್ಷೇತ್ರದ ಉಪಕರಣಗಳು ಅವುಗಳ ವಿನ್ಯಾಸ ಹೆಸರು ಇತ್ಯಾದಿ ೨೦-೨೧ನೇ ಶತಮಾನದ ಈ ಭಾಗದ ಗ್ರಾಮೀಣ ಕೃಷಿಕರ ಜೀವನದಲ್ಲಿ ಕಂಡುಬರುತ್ತವೆ. ಇವರ ಸಮೀಕ್ಷೆ ವರದಿ ಮಧ್ಯಯುಗಿನ ಕರ್ನಾಟಕದ ಕರಾವಳಿ, ಮಲೆನಾಡು ಹಾಗೂ ಬಯಲು ಸೀಮೆಗಳ ಭೌಗೋಳಿಕ ಪರಿಚಯದೊಂದಿಗೆ ಹವಾಮಾನ, ನೀರಾವರಿ, ಕೃಷಿ, ನೀರಾವರಿ ಬೆಳೆಗಳು ಕೃಷಿ ಉಪಕರಣಗಳು, ವಿವಿಧ ಧಾನ್ಯಗಳು, ಕೃಷಿಯಲ್ಲಿ ತೊಡಗಿದ ಜೀತದಾಳುಗಳು, ಅರಣ್ಯ ಉತ್ಪನ್ನಗಳು ಇತ್ಯಾದಿ ಮಾಹಿತಿಗಳನ್ನು ಒಳಗೊಂಡಿದೆ.[೧೨]

**ಹಾನಗಲ್ ಪರಿಸರದ ಆಯ್ದ ಪ್ರಮುಖ ಕೆರೆಗಳು :**

**ಆನೆ ಕೆರೆ :**

ಹಾನಗಲ್ಲ ದಕ್ಷಿಣ ದಿಕ್ಕಿಗಿರುವ ಮಳೆಯಾಶ್ರಿತವಾದ ದೊಡ್ಡಕೆರೆ. ಜಡ್ಡಿ ಕಾಲುವೆಯ ಮೂಲಕ ಹರಿದು ಬರುವ ನೀರನ್ನು ಕೆರೆಗೆ ತಿರುಗಿಸಲಾಗಿದೆ. ಹೆಚ್ಚುವರಿ ನೀರು ಕೋಡಿಯ ಮೂಲಕ ಕೋಟೆಯ ಸುತ್ತಲಿನ ಕಂದಕಕ್ಕೆ ಹರಿದು ಶಾಸ್ತ್ರಿ ಹೊಂಡ ತಲುಪುತ್ತದೆ. ಕೆರೆಯ ಏರಿಯನ್ನು ವರಟಾದ ದುಂಡು ಕಲ್ಲು ಮತ್ತು ದೇವಾಲಯಕ್ಕೆ ಬಳಸಲಾದ ಶಿಲೆಗಳಿಂದ ನಿರ್ಮಿಸಲಾಗಿದೆ. ಕೆರೆಯ ರಕ್ಷಣೆ ಮತ್ತು ದೀರ್ಘಕಾಲ ಬಾಳಿಕೆಯ ದೃಷ್ಟಿಯಿಂದ ಈ ಏರಿಯನ್ನು ಅಂಕುಡೊಂಕಾಗಿ ರಚಿಸಲಾಗಿದೆ. ಇದರಿಂದಾಗಿ ನೀರಿನ ಒತ್ತಡ ಕೆರೆಯ ಏರಿಯಲ್ಲಿ ಹಂಚಿಹೋಗಿ ಏರಿಯು ಸುರಕ್ಷಿತವಾಗಿರುತ್ತದೆ. ಆಕಸ್ಮಿಕವಾಗಿ ಕೆರೆ ಕಟ್ಟೆ ಒಡೆದರೂ ಏರಿಯ ಸಣ್ಣ ಭಾಗ ಮಾತ್ರವೇ ಒಡೆದು ದುರಸ್ತಿ ಕಾರ್ಯ ಸುಲಭವಾಗುತ್ತಿತ್ತು. ಈ ರೀತಿಯ ತಂತ್ರಜ್ಞಾನವನ್ನು ಕೆರೆ ನಿರ್ಮಾಣದಲ್ಲಿ ಬಳಸಲಾಗಿದೆ. ಈ ಕೆರೆಯು ೪೮.೨೮ ಹೆಕ್ಟೇರ್‌ಗಳಷ್ಟು 'ಅನೆಕೆರೆ' ಎಂಬ ಹೆಸರು ಬಂದಿರಬಹುದಾಗಿದೆ. ಹೊಯ್ಸಳ ದೊರೆ ವಿಷ್ಣುವರ್ಧನ ತನ್ನ ಗಜಪಡೆಯೊಂದಿಗೆ ಕ್ರಿ.ಶ.೧೧೧೮, ೧೧೨೨, ೧೧೩೫, ೧೧೩೫ ಹೀಗೆ ನಾಲ್ಕು ಬಾರಿ ಕೋಟೆಯ ಮೇಲೆ ದಾಳಿ ಮಾಡಿದನು. ನಂತರ ಇಮ್ಮಡಿ ವೀರ ಬಲ್ಲಾಳನು ವಾರಂಗಲ್ಲಿನ ದಕ್ಷಿಣ ಭಾಗದಲ್ಲಿರುವ "ಆನೆ ತಟಾಕ"ದ ಬಳಿಯಲ್ಲಿ ತನ್ನ ಗಜನಪಡೆಯೊಂದಿಗೆ ಬೀಡು ಬಿಟ್ಟು, ಹಾನಗಲ್ಲು ಕೋಟೆಗೆ ಕ್ರಿ.ಶ. ೧೧೮೯ ರಲ್ಲಿ ಮುತ್ತಿಗೆ ಹಾಕಿದನು. ಈ ಕೋಟೆ ಕಾಳಗದಲ್ಲಿ ಸಾಹಣಿಯೊಬ್ಬನು ವೀರ ಮರಣ ಹೊಂದಿದ್ದನ್ನು ಶಾಸನ ತಿಳಿಸುತ್ತದೆ. ಗಜದಳದ ದೃಶ್ಯವಿರುವ ೧೨ನೇಯ ಶತಮಾನದ ವೀರಗಲ್ಲೊಂದು ಕೋಟೆಭಾಗದಲ್ಲಿ ಕಂಡುಬರುತ್ತದೆ. ಇದು ನಾಲ್ಕು ಸುತ್ತಿನ ಅಬೇಧ್ಯ ಕೋಟೆಯಾಗಿತ್ತು. ಅದನ್ನು ಭೇದಿಸುವುದು ತುಂಬಾ ವಿಳಂಬವಾದಾಗ, ಕೆರೆಯ ಆಶ್ರಯದಲ್ಲಿ ಬೀಡು ಬಿಡುವುದು ಅನಿವಾರ್ಯವಾಗುತ್ತಿತ್ತು. ಆನೆಕೆರೆಯ ದಂಡೆಯ ಮೇಲೆ ವೈಭವಪೂರ್ಣವಾದ ಬಿಲ್ಲೇಶ್ವರ ದೇವಸ್ಥಾನ ಇದ್ದು, ಈಗ ಗರ್ಭಗೃಹವನ್ನು ಹೊರತುಪಡಿಸಿ ಉಳಿದ ಭಾಗ ನಾಶವಾಗಿದೆ. ಈ ದೇವಾಲಯವನ್ನು "ಬಿಲ್ಲಮುನ್ನೋರ್ವರು" ಎಂಬ ಸಂಘ ಕ್ರಿಶ. ೧೧೧೯ರಲ್ಲಿ ನಿರ್ಮಿಸಿದ್ದರಿಂದ "ಬಿಲ್ಲಾಳೇಶ್ವರ ದೇವಸ್ಥಾನ" ಎಂಬ ಹೆಸರು ಬರಲು ಕಾರಣವಾಗಿದೆ. ದೇವಸ್ಥಾನ ನಿರ್ಮಾಣದೊಂದಿಗೆ ತಲೆಯೆತ್ತುತ್ತಲಿದ್ದ ತಟಾಕ ನಿರ್ಮಾಣ ಒಂದು ದೃಷ್ಟಿಯಿಂದ ಧರ್ಮ ಕಾರ್ಯವೆನಿಸಿದರೂ, ಇನ್ನೊಂದು ದೃಷ್ಟಿಯಿಂದ ಸಾರ್ವಜನಿಕ ಕಾರ್ಯವೆನಿಸಿದ್ದವು. ಶಿವನೊಡನೆ ಗಂಗೆಯೆಂಬಂತೆ

ದೇವ ಪ್ರತಿಷ್ಠೆಯೊಂದಿಗೆ ತಟಾಕಗಳ ನಿರ್ಮಾಣ ಮಾಡುವುದು ಪ್ರಾಚೀನ ಕರ್ನಾಟಕದ ವಿಶಿಷ್ಟ ಪದ್ಧತಿ ಎನಿಸಿತ್ತು. ಈ ಬಿಲ್ಲಾಳೇಶ್ವರ ದೇವಾಲಯ ನಿರ್ಮಾಣದ ಅವಧಿಯಲ್ಲಿಯೇ ಆನೆಕೆರೆ ನಿರ್ಮಾಣವಾಗಿರಬಹುದು.

ಹಾನಗಲ್ಲು ಆನೆಕೆರೆ ಹತ್ತಿರ ನಡೆದ ಕೋಟೆ ಕಾಳಗದಲ್ಲಿ ಬಿಲ್ಲು ಮುನ್ನೋರ್ವರು ಕೋಟೆ ರಕ್ಷಣೆಗಾಗಿ ಹೋರಾಡಿರಬಹುದು. ಅವರು ಬಿಲ್ಲು ವಿದ್ಯೆಯಲ್ಲಿ ಪ್ರವೀಣರಾದ ಮಹಾನ್ ವೀರರಾಗಿದ್ದರು. ಶಾಸನವು ಅವರನ್ನು ಜಗತೀಕಳ ವಿಖ್ಯಾತ ಭುವನ ಪರಾಕ್ರಮೋನ್ನತರು. ಕಾಡಾನೆ ಮಲ್ಲರು, ಅಡವಿ ಕಂದಪರು, ದೋಟವಿಳಾಸರು. ಮೆರೆವುಗೆ ಕಾವರು, ಛಲದಂಕರಾಮರು, ಸಾಹಸಶೌರ್ಯರು, ರಣರಂಗಭೀಮನು, ನಡಿದಂತೆ ಗಂಡರು, ಕದನ ಪ್ರಚಂಡರು. ಏಕಾಂಗ ವೀರರು, ಶರಣಾಗತ ವಜ್ರಪಂಜರು, ಬಿಲ್ಲೇಶ್ವರ ದೇವರ ಪಾದಾರಧಕರಪ್ಪ ಬಿಲ್ಲಮುನ್ನೋರ್ವರು ಎಂದು ವರ್ಣಿಸಿದೆ.[೧೩]

**ಕುಂಟನ ಹೊಸಳ್ಳಿ:** ಇದು ಹಾನಗಲ್ಲಿನ ಪ್ರಾಚೀನ ಕೆರೆಯಾಗಿದ್ದು, ಕುಂಟನ ಹೊಸಳ್ಳಿಯ ಊರಿನ ಹೊರಗಡೆ ವಿರಕ್ತ ಮಠದ ಆವರಣದ ಪಕ್ಕದಲ್ಲಿ ಇದೆ. ಈ ಕೆರೆಯ ಏರಿ ಮೇಲೆ ಒಂದನೇ ತೈಲ ಎರಡನೆಯ ತೈಲಪರ ಕಾಲದ ಎರಡು ಶಾಸನಗಳು ಸಿಗುತ್ತವೆ. ಅದರಂತೆ ಒಂದನೇ ತೈಲ ಶಾಸನವು ತ್ರುಟಿತವಾಗಿದ್ದು ರಟ್ಟಿಯಳ್ಳಿಯ ಕಾಳಗದಲ್ಲಿ ಛಲದಂಕ ಮಾಡಿಸಲ್ಪಟ್ಟ ಸೇವಕ ಬರವಿ ವೀರಮಿಣ ಹಾಗೂ ಯರಗದಿ ಮಿಣಿಯಮ್ಮ ಮತ್ತು ಪಾಡುವ ಕರಿಯಮ್ಮರಿಂದ ಕೆರೆಯ ಜೀರ್ಣೋದ್ದಾರಕ್ಕಾಗಿ ದಾನವನ್ನು ನೀಡಿರುವ ಉಲ್ಲೇಖಗೊಂಡಿದೆ.[೧೪]

ಜಗದೇಕಮಲ್ಲನ ಎರಡನೇ ಶಾಸನವು ನಾಗಿಶೆಟ್ಟಿ ಮೊದಲಾದವರಿಂದ ಬಸದಿಗೆ ಭೂದಾನ ನೀಡಿರುವುದು ನಮಗೆ ತಿಳಿಯುತ್ತದೆ[೧೫] ಈ ಕೆರೆಯ ಏರಿಯ ಮೇಲೆ ವಿಜಯನಗರ ಕಾಲದ ಆಂಜನೇಯ ಮೂರ್ತಿಯಿದ್ದು ದೇವಾಲಯದ ಹೊರಗಡೆ ಭಗ್ನವಾದ ಶಿಲ್ಪಗಳು ಬಿದ್ದಿವೆ.

ಕೆರೆಯು ಪ್ರಾಚೀನ ಕಾಲದಿಂದ ವಿಜಯನಗರದ ಕಾಲದವರೆಗೆ ನಿರ್ವಹಣೆಯಾಗುತ್ತಾ ಬಂದಿದೆ. ಅದರಂತೆ ಇದು ಗ್ರಾಮೀಣದಲ್ಲಿ ಜನವಸತಿ ಕಡಿಮೆ ಇದ್ದು ಪಕ್ಕದ ಪಟ್ಟಣ ಹಾನಗಲ್ಲ ಸ್ಥಳಾಂತರಗೊಂಡಿದ್ದಾರೆ. ಆದರೆ ಕೆರೆಯು ಇತ್ತಿಚೀನ ದಿನಗಳಲ್ಲಿ ತುಂಬಾ ಸುಂದರವಾಗಿ ಅಚ್ಚುಕಟ್ಟಾದ ಸ್ಥಿತಿಗೆ ತಂದಿದ್ದಾರೆ. ಕೆರೆಯ ಏರಿಯನ್ನು ಡಾಂಬರೀಕರಣ

ಮಾಡಿ ಕೆರೆಯ ಒಡ್ಡುಗಳನ್ನು ಆಧುನಿಕ ರೀತಿಯ ಕಲ್ಲುಗಳಿಂದ ಭದ್ರಪಡಿಸಲಾಗಿದೆ. ಇಲ್ಲಿ ಒಟ್ಟು ಮೂರು ತೂಬಗಳಿದ್ದು, ೩ ಕಾಲುವೆಗಳ ಮುಖಾಂತರ ಪಕ್ಕದ ಹೊಲಗಳಿಗೆ ನೀರು ಹಾಸಿ ಬೆಳೆಗಳನ್ನು ಬೆಳೆಯುತ್ತಾರೆ. ಈ ಕೆರೆಯು ಸುಮಾರು ೧ ರಿಂದ ೪ ಹೆಕ್ಟೇರ್ ಜಲಾನಯನ ಪ್ರದೇಶವನ್ನು ಹೊಂದಿದೆ.

**ಬೈಚವಳ್ಳಿ ತಂಗಾಳಿಕೆರೆ:** ಇದು ಹಾನಗಲ್ಲ ಪರಿಸರದಿಂದ ಉತ್ತರ ದಿಕ್ಕಿಗೆ ೧೨ ಕಿ.ಮೀ ದೂರದಲ್ಲಿರುವ ಒಂದು ಪ್ರಾಚೀನ ಕೆರೆಯಾಗಿದೆ. ಕೆರೆಯ ಏರಿಯ ಮೇಲೆ ಬಸವೇಶ್ವರ ದೇವಾಲಯವಿದ್ದು ಈ ಕೆರೆಯನ್ನು ಇಲ್ಲಿಯ ಜನ ತಂಗಾಳಿ ಕೆರೆಯೆಂದು ಕರೆಯುತ್ತಾರೆ. ಕೆರೆಯ ಏರಿಯ ಮೇಲೆ ಸೈನಿಕರು ಮತ್ತು ಅರಸರು ವಾಯುವಿಹಾರಕ್ಕೆ ಹೋಗುತ್ತಿದ್ದರು ಎಂದು ಸ್ಥಳೀಯ ಜನ ಹೇಳುತ್ತಾರೆ. ಅದರಂತೆ ಈ ಕೆರೆಯ ಸುತ್ತಲಿನ ಪರಿಸರ ಯಾವಾಗಲೂ ಸುಂದರ ಹಾಗೂ ತಂಪಾದ ವಾತಾವರಣವನ್ನು ಹೊಂದಿದೆ. ಈ ಕೆರೆಯ ಏರಿಯ ಮೇಲೆ ೬ ಶಾಸನಗಳು ಕಂಡುಬರುತ್ತವೆ. ಅವು ಕ್ರಮವಾಗಿ ಈ ರೀತಿಯಾಗಿವೆ. ಎರಡನೇ ತೈಲವ ಗೋಗ್ರಹಣದ ಪ್ರಸಂಗದಲ್ಲಿ ಬೀಡಿ ಚಟ್ಟಯ್ಯನ ವೀರ ಮರಣ ಅದೇ ರೀತಿಯಾಗಿ ೨ ನೇ ಶಾಸನ ಒಂದನೇ ಸೋಮೇಶ್ವರ ೧ ಬೈಚುವಳಿಯ ಕೆರೆಯ ಜೀರ್ಣೋದ್ಧಾರ ಮಾಡಿದ ೧೧ ನೇ ಹಾಗೂ ಭೂದಾನ ಮಾಡಿದ ಬಗ್ಗೆ ತಿಳಿಸುತ್ತಿದೆ.[೧೬] ಅದೇ ರೀತಿ ಸೋಮೇಶ್ವರನ ಕಾಲದ ವ್ಯಕ್ತಿ ಒಬ್ಬ ವೀರಮರಣ ಹೊಂದಿದ ಬಗ್ಗೆ ನಮಗೆ ಮಾಹಿತಿ ಸಿಗುತ್ತಿದೆ. ಆದರೆ ಆ ಶಾಸನಗಳು ತ್ರುಟಿತವಾಗಿವೆ. ಅದೇ ರೀತಿಯಾಗಿ ಕೆರೆಯ ಏರಿಯ ಬಲಭಾಗದಲ್ಲಿ ಆಂಜನೇಯ ದೇವಾಲಯವಿದೆ. ಅಲ್ಲಿ ಎರಡು ಶಾಸನಗಳಿವೆ. ಅವು ಕಾಮದೇವ ಮತ್ತು ಅಚ್ಯುತರಾಯನ ಶಾಸನಗಳಾಗಿವೆ ಬಂಕಾಪುರದ ಅಧಿಕಾರಿ ತಿರುಪತಯ್ಯನಿಂದ ಬೈಚುವಳಿ ಗ್ರಾಮದಾನ ನೀಡಿದ ಉಲ್ಲೇಖವಿದೆ. ೮೦ ಎಕರೆ ಪ್ರದೇಶವನ್ನು ಆವರಿಸಿಕೊಂಡಿದ್ದು ಇದರ ಒಡ್ಡು ಸುಮಾರು ೨೦ ರಿಂದ ೩೦ ಅಡಿಗಳಷ್ಟು ಎತ್ತರವಾಗಿದೆ. ಈ ಕೆರೆಯ ಏರಿ ಸುಮಾರು ೨ ಕಿ. ಮೀ ಇದ್ದು ಎತ್ತರ ೧೦ ಮೀಟರ ಇದೆ. ಈ ಕೆರೆಗೆ ೪ ತೂಬುಗಳಿದ್ದು, ೩ ಕಾಲುವೆಗಳನ್ನು ಹೊಂದಿದೆ. ಇತ್ತೀಚಿನ ದಿನಗಳಲ್ಲಿ ಕೆರೆಯನ್ನು ನವೀಕರಣಗೊಳಿಸಲಾಗಿದ್ದು ಕಾಲುವೆಗಳ ಮುಖಾಂತರ ಹರಿದಂತಹ ನೀರನ್ನು ವ್ಯವಸಾಯಕ್ಕೆ ಬಳಸುತ್ತಾರೆ.

**ತಿಳುವಳ್ಳಿ ದೊಡ್ಡಕೆರೆ:** ಇದು ಹಾನಗಲ್ಲ ಪರಿಸರದಲ್ಲಿ ಇರುವ ದೊಡ್ಡ ಕೆರೆಯಾಗಿದೆ. ಇಂದಿಗೂ ಅದು ಸುಸ್ಥಿತಿಯಲ್ಲಿದ್ದು ಹಾನಗಲ್ಲನಿಂದ ೨೦ ಕಿ.ಮೀ ದೂರದಲ್ಲಿದೆ. ಈ ಕೆರೆ ೪ನೇ

ವಿಕ್ರಮಾದಿತ್ಯನು ಕಾಲದಲ್ಲಿ ನಿರ್ಮಾಣವಾಗಿದೆ. ಈ ಪ್ರದೇಶವು ನಾಗರಖಂಡ ೭೦ ಪಾನಂಗಲ್ಲು ೫೦೦ ಆಡಳಿತ ವಿಭಾಗಳಲ್ಲಿ ಅಗ್ರಹಾರವಾಗಿದ್ದು ಇತಿಹಾಸದ ಪುಟಗಳಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಈ ಪ್ರದೇಶವು ನಾಲ್ಕನೆಯ ವಿಕ್ರಮಾದಿತ್ಯ, ಮೂರನೇ ತೈಲ, ಮಹಾದೇವ, ಮಲ್ಲಿಕಾರ್ಜುನ ಹೀಗೆ ಹಲವಾರು ಅರಸರು, ಮಾಂಡಲೀಕರು ಈ ಪ್ರದೇಶವನ್ನು ಆಳಿದ್ದು ಕೆರೆಯನ್ನು ಕಾಲಕಾಲಕ್ಕೆ ನಿರ್ವಹಣೆ ಮಾಡಲಾಗಿದೆ. ಈ ಕೆರೆಯ ಏರಿಯ ಮೇಲೆ ೩ ಶಾಸನಗಳಿವೆ[೧೭] ಈ ಕೆರೆಯು ೫೦೦ ಎಕರೆ ಪ್ರದೇಶದ ವಿಸ್ತಾರವನ್ನು ಒಳಗೊಂಡಿದ್ದು, ಅಚ್ಚುಕಟ್ಟು ಸುಮಾರು ೧೨೦೦ ಎಕರೆ ಹೆಚ್ಚು ಪ್ರದೇಶಕ್ಕೆ ನೀರುಣಿಸುವುದು. ಈ ಕೆರೆಯ ಮೇಲ್ಭಾಗದಲ್ಲಿ ಹಲವಾರು ಕೆರೆ ಕುಂಟೆಗಳಿದ್ದು ಅವುಗಳಲ್ಲಿ ಹೆಚ್ಚುವರಿಯಾದ ನೀರು ಈ ಕೆರೆಯಲ್ಲಿ ಸಂಗ್ರಹಗೊಳ್ಳುತ್ತದೆ.

ಈ ಕೆರೆಯ ಏರಿಯ ಉದ್ದ ೫ ಕಿ.ಮೀ ಇದ್ದು, ಎತ್ತರ ೮ ಮೀಟರ್ ಇದೆ. ಈ ಕೆರೆಗೆ ೫ ಕಾಲುವೆಗಳು ಇವೆ. ಇದಕ್ಕೆ ೫ ತೂಬುಗಳು ಪ್ರಾಚೀನ ಕಾಲವಾಗಿದ್ದು ಇವುಗಳ ತೊಲೆಯ ಮೇಲೆ ಅಲಂಕಾರಿಕ ಗೆರೆ ಮತ್ತು ಗಜಶಿಲ್ಪಗಳು ಕಂಡುಬರುತ್ತವೆ. ಈ ತೂಬುಗಳ ಮೇಲೆ ತ್ರುಟಿತ ಅಕ್ಷರಗಳಿದ್ದು ಅವು ಓದಲು ಅಸ್ಪಷ್ಟವಾಗಿವೆ.

ತಿಳಿವಳ್ಳಿ ಪ್ರದೇಶವು ಮೊದಲನಿಂದಲೂ ಪ್ರಾಚೀನ ಅಗ್ರಹಾರ ಕೇಂದ್ರವಾಗಿದ್ದರಿಂದ ಕೆರೆಯ ನಿರ್ವಹಣೆಯನ್ನು ಮೊದಲಿನಿಂದಲು ಬ್ರಾಹ್ಮಣರಿಗೆ ನೀಡಲಾಗಿದೆ. ಸುಮಾರು ದಿನಗಳವರೆಗೆ ಎಂದರೆ ೧೯೬೫ ರ ವರೆಗೆ ಈ ಕೆರೆಯನ್ನು ಊರಿನ ನಾಡಗೇರರು, ದೇಸಾಯಿಯವರು, ಜೋಶಿಯವರ ಮನೆತನಗಳು ನೋಡಿಕೊಳ್ಳುತ್ತಿದ್ದರು. ನಂತರ ಇದರ ಕಟ್ಟೆ ಮತ್ತು ಹೊಂಡಗಳನ್ನು ಪಾಟೀಲರು ಶಾನಭೋಗರು ನೋಡಿಕೊಳ್ಳುತ್ತಿದ್ದರು.

ಈ ಕೆರೆಯು ಇತ್ತೀಚಿನ ದಿನಗಳಲ್ಲಿ ಜನಸಂಪನ್ಮೂಲ ಅಭಿವೃದ್ಧಿಯನ್ನು ಹೊಂದಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಾಲುವೆಯಲ್ಲಿ ದೇವಸ್ಥಾನದ ಅವಶೇಷಗಳು, ಮೂರ್ತಿಶಿಲ್ಪಗಳು ಸಿಕ್ಕಿದ್ದು, ಅವುಗಳನ್ನು ಗ್ರಾಮದ ಪ್ರವಾಸಿಮಂದಿರದಲ್ಲಿ ಸಂರಕ್ಷಿಸಿ ಮುಂದಿನ ಕ್ರಮಕ್ಕೆ ಗ್ರಾಮ ಪಂಚಾಯತಿಗೆ ಮನವಿಮಾಡಲಾಗಿದೆ.

**ಪದ್ಮಮನ ಕೆರೆ: ನಿಡಸಿಂಗಿ**

ಈ ಕೆರೆಯು ಹುಬ್ಬಳ್ಳಿಗೆ ಹೋಗುವ ಮಾರ್ಗಮಧ್ಯದಲ್ಲಿ ಹಾನಗಲ್ಲನಿಂದ ೧೮ಕಿ. ಮೀ. ದೂರದಲ್ಲಿ ಸಿಗುತ್ತದೆ. ಈ ಕೆರೆಯನ್ನು ೧೧ ನೇ ಶತಮಾನದಲ್ಲಿ ನಿರ್ಮಾಣವಾದ ಕೆರೆ. ಈ

ಕೆರೆಯನ್ನು ಆರನೆಯ ವಿಕ್ರಮಾದಿತ್ಯನರ ಕಾಲದಲ್ಲಿ ನಿರ್ಮಾಣವಾಗಿದೆ. ಈ ಕೆರೆಯು ೧೦೦ ಎಕರೆ ಪ್ರದೇಶದ ವಿಸ್ತಾರವನ್ನು ಒಳಗೊಂಡಿದೆ ಮತ್ತು ಅಚ್ಚುಕಟ್ಟು ೧೪೦ ಎಕರೆಗೂ ಅಧಿಕ ಪ್ರದೇಶಕ್ಕೆ ನೀರುಣಿಸುವುದು. ಈ ಕೆರೆಯ ಏರಿಯ ಮೇಲೆ ಒಟ್ಟು ೩ ಶಾಸನಗಳು ಕಂಡುಬರುತ್ತವೆ. ಅವುಗಳ ಹಿನ್ನೆಲೆಯು ಈ ರೀತಿಯಾಗಿವೆ. ಒಂದನೇ ಶಾಸನವು ಆರನೇಯ ವಿಕ್ರಮಾದಿತ್ಯ ಕಾಲದಲ್ಲಿ ನಿರ್ಮಾಣವಾದ ಕೆರೆ, ಈ ಕೆರೆಯ ಏರಿಯ ಮೇಲೆ ಒಟ್ಟು ೩ ಶಾಸನಗಳು ಕಂಡುಬರುತ್ತವೆ. ಅವುಗಳ ಹಿನ್ನೆಲೆಯು ಈ ರೀತಿಯಾಗಿವೆ. ಒಂದನೇ ಶಾಸನ ವಿಕ್ರಮಾದಿತ್ಯ ಕಾಲದಲ್ಲಿ ಪಿರಿಯರಸಿ ಲಕ್ಷ್ಮೀದೇವಿಯ ನಿಟ್ಟಸಂಗಿಯನ್ನಾಳುವಾಗ ಉಗುರಮಾನ್ಯರು ಕೊಯ್ಲಲ್ವೇಶ್ವರ ದೇವರಿಗಾಗಿ ಸಂಸ್ಥಾಪನಾಚಾರ್ಯ ಸೋಮೇಶ್ವರ ಪಂಡಿತರಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ,[೧೮] ಮತ್ತೊಂದು ಶಾಸನ ತ್ರುಟಿತವಾಗಿದ್ದು ಮಹಾದೇವಾಲಯಕ್ಕೆ ಬಿಟ್ಟ ಭೂದಾನವಾಗಿದೆ. ಇದೇ ರೀತಿಯಾಗಿ ಕೆರೆ ಆರಂಭಿಕ ಭಾಗದಲ್ಲಿರುವ ಮಗದೊಂದು ಶಾಸನ ತ್ರುಟಿತವಾಗಿದ್ದು ಅದರಲ್ಲಿ ಪದ್ಮದೇವಿ ಎಂಬ ಹೆಸರು ಮಾತ್ರ ಕಾಣುತ್ತದೆ. ಇಲ್ಲಿಯ ಜನ ಹಿಂದಿನಿಂದಲು ಪದ್ದಮ್ಮನ ಕೆರೆ ಎಂದು ಕರೆಯುತ್ತಾರೆ. ಒಟ್ಟಿನಲ್ಲಿ ಪದ್ದಮ್ಮನ ಕೆರೆಯು ಪ್ರಾಚೀನವಾಗಿದ್ದು. ಈಗ ನಿಡಸಿಂಗಿಯಲ್ಲಿ ಜನರು ವಾಸವಾಗಿಲ್ಲ. ಗ್ರಾಮದ ಎಲ್ಲ ಜನರು ಬೊಮ್ಮನಹಳ್ಳಿಯಲ್ಲಿ ವಾಸವಾಗಿದ್ದಾರೆ. ಆದರೆ ಪ್ರತಿವರ್ಷ ನಡೆಯುವ ಬಸವೇಶ್ವರ ಜಾತ್ರೆಯಲ್ಲಿ ಕೆರೆಯು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಗ್ರಾಮದ ಜನರು ವರ್ಷಕ್ಕೊಮ್ಮೆ ನಡೆಯುವ ಬಸವನ ಜಾತ್ರೆಗೆ ಕೆರೆಗೆ ಪೂಜೆಯನ್ನು ಸಲ್ಲಿಸಿ, ಕೆರೆಯ ಅಂಗಳದಲ್ಲಿ ಬಂಡಿ ಓಡಿಸುವ ಸ್ಪರ್ಧೆಯನ್ನು ಏರ್ಪಡಿಸುತ್ತಾರೆ. ಮಾರನೆಯ ದಿನ ಕೆರೆಯ ಅಂಗಳದಲ್ಲಿ ಜನರು ಅಡಿಗೆಯನ್ನು ಮಾಡಿ ಕೆರೆಗೆ ಪೂಜೆಸಲ್ಲಿಸಿ ಎಲ್ಲರೂ ಊಟ ಮಾಡಿ ಮಳೆಯ ಆಗಮನಕ್ಕೆ ಹರಕೆಯನ್ನು ಸಲ್ಲಿಸುತ್ತಾರೆ. ಈ ಕೆರೆಯ ಮಳೆಗಾಲದಲ್ಲಿ ಭರ್ತಿಯಾಗಿ ಬೇಸಿಗೆಯಲ್ಲಿ ಬತ್ತುತ್ತದೆ. ಈ ಕೆರೆಯು ಮಳೆಯಾಶ್ರಿತ ಕೆರೆಯಾಗಿದೆ. ಈ ಕೆರೆಯ ಏರಿಯು ಮಣ್ಣಿನಿಂದ ಕೂಡಿದ್ದು, ಒಳಭಾಗ ಕಲ್ಲಿನಿಂದ ರಚಿಸಲ್ಪಟ್ಟಿದೆ. ಇದಕ್ಕೆ ಎರಡು ತೂಬುಗಳು ಇದ್ದು, ಎರಡು ಕಾಲುವೆಗಳನ್ನು ಹೊಂದಿದೆ.

**ದೊಡ್ಡ ಕೆರೆ: ಗಾಜಿಪುರ :**

ಇದು ಹಾನಗಲ್ಲು ಪರಿಸರದಲ್ಲಿ ಪ್ರಾಚೀನ ಕೆರೆಯಾಗಿದ್ದು, ಹಾನಗಲ್‌ದಿಂದ ಉತ್ತರಕ್ಕೆ ೪ ಕಿ.ಮೀ ದೂರದಲ್ಲಿದೆ. ಇಲ್ಲಿ ಎರಡು ಕೆರೆಗಳಿದ್ದು, ದೊಡ್ಡ ಕೆರೆ ಮತ್ತು ಹುಡ್ಯಯಿನ ಕೆರೆ ಎಂದು ಕರೆಯುವರು. ಇಲ್ಲಿ ೧೧-೧೨ ಶತಮಾನದಲ್ಲಿ ನಿರ್ಮಿತವಾದ ಕಲ್ಯಾಣ ಚಾಲುಕ್ಯರ

ಕಾಲದ ಈಶ್ವರನ ದೇವಾಲಯವಿದೆ. ಇದೇ ದೇವಾಲಯದ ಏರಿಯ ಮೇಲೆ ನಾಲ್ಕು ಕಂಬಗಳ ಮಂಟಪವಿದ್ದು, ನಡುವೆ ಶಿವಲಿಂಗವಿದೆ. ಇದರ ಸುತ್ತಲೂ ಇದ್ದ ಮಣ್ಣಿನಗೋಡೆ ಬಿದ್ದುಹೋಗಿದೆ. ಈ ನಾಲ್ಕು ಕಂಬಗಳು ಇಲ್ಲಿದ್ದ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಕ್ಕೆ ಸಂಬಂಧಿಸಿದವುಗಳಾಗಿವೆ. ಇದೇ ರೀತಿಯಾಗಿ ಕೆರೆಯ ಕಾಲುವೆಗಳ ಬಲಭಾಗದಲ್ಲಿ ಎರಡು ವೀರಗಲ್ಲುಗಳು ಕಂಡುಬರುತ್ತವೆ.[೧೯] ಕೆರೆಯಿಂದ ಸ್ವಲ್ಪ ದೂರದಲ್ಲಿ ವೀರಭದ್ರ ದೇವಸ್ಥಾನವಿದ್ದು, ಅಲ್ಲಿ ಎರಡು ತ್ರುಟಿತ ಶಾಸನಗಳಿವೆ ಗಾಜಪುರ ಕೆರೆಯ ಏರಿಯ ಉದ್ದವು ೧.೫ ಕಿ.ಮೀ. ಇದ್ದು, ಎತ್ತರ ೮ ಅಡಿ ಇದೆ ಈ ಕೆರೆಗೆ ಎರಡು ಕಾಲುವೆಗಳಿವೆ. ಇದಕ್ಕೆ ಎರಡು ತೂಬಗಳಿವೆ. ಈ ಕೆರೆಯ ಹತ್ತಿರ ಮಸೀದಿ ಇದ್ದು, ಗ್ರಾಮದ ಜನರು ಹಬ್ಬಗಳ ದಿನ ಇಲ್ಲಿ ಪೂಜೆಯನ್ನು ಸಲ್ಲಿಸುತ್ತಾರೆ.

ಈ ಕೆರೆಯು ಹಿಂದಿನಿಂದಲೂ ಮಳೆಯ ನೀರನ್ನು ಆಶ್ರಯಿಸಿದ್ದು, ಇತ್ತೀಚಿನ ದಿನಗಳಲ್ಲಿ ಧರ್ಮಾ ನದಿಯ ಕಾಲುವೆಗೆ ಸಂಪರ್ಕ ಕಲ್ಪಿಸುವ ಯೋಜನೆ ಜಾರಿಯಲ್ಲಿದೆ. ಈ ಕೆರೆಯು ೮.೮೫ ಎಂ. ಸಿ. ಎಫ್. ಟಿ ಪ್ರಮಾಣದಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ಹೊಂದಿದೆ. ಕೆರೆಯ ಜಲ ವಿಸ್ತೀರ್ಣ ೧೯೦ ಹೆಕ್ಟೇರ್ ಮತ್ತು ಅಚ್ಚುಕಟ್ಟು ಪ್ರದೇಶದ ೩೬.೬೦ ಹೆಕ್ಟೇರಗಳು. ಈ ಕೆರೆಯಲ್ಲಿ ಎರಡು ತೂಬುಗಳಿದ್ದು. ಒಂದು ಕಾಲುವೆಯಿದೆ. ಈ ಕೋಡಿಯು ಉತ್ತಾರಾಭಿಮುಖವಾಗಿದೆ. ಕೆರೆಯ ಏರಿಯು ಪೂರ್ವ ಪಶ್ಚಿಮಾಭಿಮುಖವಾಗಿದ್ದು. ಉತ್ತರ ದಿಕ್ಕಿಗೆ ಈ ಪ್ರದೇಶದಲ್ಲಿ ಬಿದ್ದ ಮಳೆಯು ಸಣ್ಣ ತೊರೆಗಳಾಗಿ ಉತ್ತರ ಭಾಗಕ್ಕೆ ಹರಿಯುತ್ತದೆ. ಕೆರೆಯಲ್ಲಿ ನೀರನ್ನು ಸಂಗ್ರಹಿಸಲು ಉತ್ತರ ಭಾಗಕ್ಕೆ ಏರಿಯನ್ನು ಕಟ್ಟಲಾಗಿದೆ. ಇದು ಮಣ್ಣಿನ ಏರಿಯಾದರು ಕೆರೆಯ ಅಭಿಮುಖವಾದ ಪಾರ್ಶ್ವದಲ್ಲಿ ಕಲ್ಲುಗಳಿಂದ ಕಟ್ಟಲಾದ ಕಟ್ಟಡವನ್ನು ನೋಡಿದರೆ ಇದೊಂದು ಕಲ್ಲಿನಿಂದ ಕಟ್ಟಿದ ಕೆರೆ ಎನಿಸುತ್ತದೆ. ಇಲ್ಲಿ ಮುಖ್ಯವಾಗಿ ಭತ್ತ, ರಾಗಿ, ಸೂರ್ಯಕಾಂತಿ, ಮುಸಕಿನ ಜೋಳ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ ಮತ್ತು ಮೀನು ಸಾಕಾಣಿಕೆಗೆ ಕೆರೆಯ ನೀರು ಬಳಕೆಯಾಗುತ್ತದೆ. ಕೆರೆಯಲ್ಲಿ ಬಹಳ ಹಿಂದಿನಿಂದಲೂ ಹೂಳೆತ್ತುವ ಕಾರ್ಯ ನಡೆಯುತ್ತಿದ್ದು, ಹೆಚ್ಚು ನೀರನ್ನು ಸಂಗ್ರಹಿಸುವ ಸಾಮರ್ಥ್ಯ ಹೊಂದಿದೆ. ಈ ಕೆರೆಯು ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದ್ದು ಹಲವು ಅಭಿವೃದ್ಧಿ ಕಾರ್ಯಗಳು ನಡೆಯುತ್ತಿವೆ.

**ಹುಡ್ಡಯ್ಯನ ಕೆರೆ :**

ಗಾಜಿಪುರ ಊರಿನ ದಕ್ಷಿಣಕ್ಕೆ ಮತ್ತೊಂದು ಕೆರೆಯು ಕಂಡುಬರುತ್ತದೆ. ಇದನ್ನು ಹುಡ್ಡಯ್ಯನ ಕೆರೆ ಎಂದು ಕರೆಯುತ್ತಾರೆ. ಈ ಕೆರೆಯು ಏರಿಯ ಪೂರ್ವದಿಕ್ಕಿನಲ್ಲಿದೆ. ಈ ಏರಿಯ ಉದ್ದ ಸುಮಾರು ಅರ್ಧ ಕಿ.ಮೀ. ಇದ್ದು, ಎತ್ತರ ಆರು ಅಡಿ ಇದೆ. ಈ ಕೆರೆಯನ್ನು ಅವಲೋಕಿಸಿದಾಗ ದೊಡ್ಡ ಕೆರೆಗೆ ನೀರನ್ನು ಒದಗಿಸುವ ಕೆರೆಯ ಮೂಲವಾಗಿದೆ. ಈ ಕೆರೆಯ ಹತ್ತಿರ ಯಾವುದೇ ಪ್ರಾಚೀನ ಅವಶೇಷಗಳು ಕಂಡುಬರುವುದಿಲ್ಲ. ಈ ಕೆರೆಯ ಏರಿಯು ಉತ್ತರ ದಕ್ಷಿಣಾಭಿಮುಖವಾಗಿದ್ದು, ಎರಡು ತೂಬು ಮತ್ತು ಒಂದು ಕಾಲುವೆಯನ್ನು ಕಾಣಬಹುದು. ಕಾಲುವೆಯು ೨೦ ಅಡಿಗಳಷ್ಟು ಅಗಲವಾಗಿದ್ದು, ಪೂರ್ವ ದಿಕ್ಕಿಗೆ ಇದೆ. ೪೦.೨೦ ರಷ್ಟು ನೀರಿನ ಸಂಗ್ರಹಣ ಸಾಮರ್ಥ್ಯವನ್ನು ೫೦ ಹೆಕ್ಟೇರ್ ಜಲಾನಯನ ಪ್ರದೇಶವನ್ನು ಮತ್ತು ೧೦೫ ಹೆಕ್ಟೇರ್ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದೆ. ಇಂದಿಗೂ ಸುಸ್ಥಿತಿಯಲ್ಲಿದೆ.

**ಗುಡಗುಡಿ: ಪಾರ್ವತಿದೇವಿ ಕೆರೆ** : ಇದು ಹಾನಗಲ್ಲು ಪರಿಸರದಲ್ಲಿ ಮತ್ತೊಂದು ಪ್ರಾಚೀನ ಕೆರೆಯಾಗಿದ್ದು, ಇಂದಿಗೂ ಸುಸ್ಥಿತಿಯಲ್ಲಿದ್ದು ಅದರ ಪ್ರಯೋಜನವನ್ನು ಜನರು ಪಡೆಯುತ್ತಿದ್ದಾರೆ. ಇದು ಹಾನಗಲ್ಲ ನಗರದಿಂದ ಉತ್ತರಕ್ಕೆ ೧೪ ಕಿ.ಮೀ. ದೂರದಲ್ಲಿದೆ. ಈ ಕೆರೆಯನ್ನು ಎರಡನೆಯ ವಿಕ್ರಮಾದಿತ್ಯ ನಿರ್ಮಾಣ ಮಾಡಿದನು ಎಂಬ ಕೆರೆಯ ದಡದ ಮೇಲಿರುವ ಕಾಲ ಶಾಸನದಿಂದ ತಿಳಿದುಬರುತ್ತದೆ. ಈ ಕೆರೆಯ ಏರಿಯ ಮೇಲೆ ಪಾರ್ವತಿ ದೇವಾಲಯವಿದ್ದು, ದೇವಾಲಯಕ್ಕೆ ಜನರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ನಂತರ ಈ ಕೆರೆಯ ಏರಿಯ ಮೇಲೆ ಪಾರ್ವತಿ ದೇವಸ್ಥಾನವಿದ್ದು, ಒಳಗಡೆ ಸುಮಾರು ೧೧-೧೨ ನೇ ಶತಮಾನಕ್ಕೆ ಸೇರಿದ್ದು, ಪ್ರಾಚೀನ ಶಿವಲಿಂಗವಿದೆ. ಅಂತರಾಳದಲ್ಲಿ ನಾಗನಾಗಿಣಿ ಮತ್ತು ನವರಂಗದಲ್ಲಿ ಭೈರವಿ, ಮಹಿಷಮರ್ದಿನಿ, ಸೂರ್ಯ, ನಂದಿ ಮತ್ತು ನಾಗಶಿಲ್ಪಗಳಿವೆ. ದೇವಸ್ಥಾನದ ಎದುರುಭಾಗದಲ್ಲಿ ವೀರಗಲ್ಲು ಮತ್ತಿತರ ವಿಶೇಷಗಳನ್ನು ಕಾಣಬಹುದು. ಸ್ಥಳೀಯರು ಮಹಷಿಮರ್ಧಿನಿಯನ್ನು ಪಾರ್ವತಿಗುಡಿ ಎಂದು ಕರೆಯುತ್ತಾರೆ.

ಈ ಕೆರೆಯು ಏರಿಯ ಮೇಲೆ ಇರುವ ವೀರಗಲ್ಲು ಅಮೋಘವರ್ಷನ ಬಲ್ಲಾಳಗಾವಂಡ ಕಲಿರೂಪ ಮೊದಲಾದವರು ವೀರಮರಣ ಹೊಂದಿರುವ ಬಗ್ಗೆ ತಿಳಿಸುತ್ತದೆ.[೨೦]

ಕೆರೆಯ ಏರಿಯ ಮೇಲೆ ಇರುವ ಮತ್ತೊಂದು ಶಾಸನ ತ್ರುಟಿತವಾಗಿದ್ದು, ಗುಡಗುಡಿಯ ವರ್ತಕ ಜೀರಿಯಮ್ಮನ ಉಲ್ಲೇಖವಿದೆ. ಇದೇ ರೀತಿಯಾಗಿ ಎರಡನೆಯ ಜಯಸಿಂಹರ ಕಾಲದಲ್ಲಿ ಮಯೂರವರ್ಮನು ಪಾನಗಲ್ಲು ೫೦೦ ಆಳುವಾಗ ಅಂಗಬಿಗೆಯ ಸೋಮದೇವಶಿವರಿಗೆ ಕೇತುಗಾವುಂಡನಿಂದ ದಾನ ನೀಡಿದ ವಿವರವಿದೆ.[೨೦]

ಇನ್ನೊಂದು ಶಾಸನ ಎರಡನೆಯ ಸೋಮೇಶ್ವರರ ಬಂಕಾಪುರದ ಲೊಕಶೆಟ್ಟಿಯಿಂದ ಕಲಿದೇವರಿಗೆ ದಾನ ನೀಡಿದ ಉಲ್ಲೇಖವಿದೆ.[೨೨]

ಇದೇ ರೀತಿಯಾಗಿ ಇದರ ಪಕ್ಕದಲ್ಲಿರುವ ಮತ್ತೊಂದು ಶಾಸನ ಜಗದೇಕಮಲ್ಲನದು ಅರವತ್ತಕ್ಕೆಳು ಕೂಡಬೇಕಾದ ಅಡಿಕೆಯನ್ನು ಗುಡುಗುಡಗೆ ಮಹಾಪ್ರಭು ತೈಲಗಾವುಂಡ ನಿರ್ಣಯಿಸಿದ. ಈ ರೀತಿಯಾಗಿ ಕೆರೆಏರಿಯ ಮೇಲೆ ನಾವು ೮ ಶಾಸನಗಳ ವಿವರ ಕೆರೆಗೆ ಸಂಬಂಧಿಸಿದಂತೆ ವಿವರಿಸಿ ನೋಡಬಹುದು.[೨೩]

ಈ ಕೆರೆಯು ೨೫೦ ಎಕರೆ ಪ್ರದೇಶದ ವಿಸ್ತಾರವನ್ನು ಒಳಗೊಂಡಿದೆ ಮತ್ತು ಅಚ್ಚುಕಟ್ಟು ೮೦೦ ಎಕರೆಗೂ ಹೆಚ್ಚು ಪ್ರದೇಶಕ್ಕೆ ನೀರುಣಿಸುವುದು. ಈ ಕೆರೆಯ ಪಶ್ಚಿಮಕ್ಕೆ ಹಲವಾರು ಕೆರೆ ಕುಂಟೆಗಳಿದ್ದು ಅವುಗಳಲ್ಲಿ ಹೆಚ್ಚುವರಿಯಾದ ನೀರು ಕೆರೆಗೆ ಸಂಗ್ರಹವಾಗುತ್ತದೆ. ಈ ಕೆರೆಯು ಹಾನಗಲ್ಲಿನಿಂದ ದಶರಥಕೊಪ್ಪಕ್ಕೆ ಹೋಗುವ ಮಾರ್ಗದಲ್ಲಿದ್ದು, ಇದರ ಏರಿಯು ಪೂರ್ವ ದಿಕ್ಕಿನಲ್ಲಿದ್ದು ಏರಿಯ ಉತ್ತರ ಭಾಗದಲ್ಲಿ ಹನಮಂತದೇವರ ಗುಡಿಯಿದೆ. ಈ ಗುಡಿಯ ಮುಂಭಾಗದಲ್ಲಿ ಕೋಡಿಯ ಹತ್ತಿರ ಎರಡು ಶಾಸನಗಳು ಕಂಡುಬರುತ್ತವೆ. ಅವುಗಳೆಂದರೆ ಭರಮಪ್ಪನ ಶೆಟ್ಟಿಯ ನಿಸಿದಿಕಲ್ಲಿದೆ. ಅದರಲ್ಲಿ ಸೂರ್ಯಾಸ್ತಗಣದ ನಿಷದಿಯಿಂದಿದೆ ಮತ್ತೊಂದು ಶಾಸನ ಸೇನೆಮಾನ ಹರಿನಾಯಕ ಜೀರ್ಣೋದ್ಧಾರ ಮಾಡಿಸಿದ ಉಲ್ಲೇಖವಿದೆ. ಎಲ್ಲ ಶಾಸನಗಳನ್ನು ನೋಡಿದಾಗ ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದದ್ದು ಎಂಬುದು ಸ್ಪಷ್ಟವಾಗುತ್ತದೆ.

ಈ ಕೆರೆಯ ಏರಿಯ ಸುಮಾರು ೨ ಕಿ.ಮೀ ಉದ್ದವಿದ್ದು, ೪೦ ಅಡಿಗಳಷ್ಟು ಎತ್ತರವಿದೆ. ಈ ಕೆರೆಯು ಸುಮಾರು ೩೦ಕ್ಕೂ ಹೆಚ್ಚು ಕೆರೆಗಳಿಗೆ ನೀರನ್ನು ಉಣಿಸುತ್ತದೆ. ಈ ಕೆರೆಯ ಮೇಲ್ಭಾಗದಲ್ಲಿರುವ ಬೈಚವಳಿಯ ಕೆರೆಯು ದೊಡ್ಡಕೆರೆಯ ಹೆಚ್ಚುವರಿ ನೀರು ಪಾರ್ವತಿ ಕೆರೆಗೆ ಹರಿದುಬರುತ್ತದೆ. ಕೆರೆಯ ಏರಿಯ ಮೇಲ್ಭಾಗದಲ್ಲಿ ವಿಶಾಲವಾಗಿದ್ದು, ಸುಮಾರು ೨೦ರಿಂದ೩೦ ಅಡಿಗಳಷ್ಟು ಅಗಲವಿದೆ. ಈ ಕೆರೆಯ ಒಳಭಾಗದ ಏರಿಯನ್ನು

ಕಲ್ಲುಗಳಿಂದ ನಿರ್ಮಿಸಲಾಗಿದೆ. ಈ ಕೆರೆಯ ಹೊರ ಭಾಗವು ಇಳಿಜಾರಾಗಿದ್ದು, ಮರಗಳನ್ನು ಬೆಳೆಸಿದ್ದಾರೆ. ಈ ಕೆರೆಯ ಅಂಗಳದಲ್ಲಿ ಪ್ರಾಚೀನ ಕಾಲದ ತೂಬು ಇದ್ದು, ಅದರ ಮೇಲೆ ಸುಂದರವಾದ ಗಜಲಕ್ಷ್ಮೀ ಶಿಲ್ಪವು ಆಕರ್ಷಕವಾಗಿದೆ. ಉಳಿದಂತೆ ಇತ್ತೀಚೆಗೆ ೩ ತೂಬುಗಳನ್ನು ನಿರ್ಮಿಸಿದ್ದು ೩ ಕಾಲುವೆಗಳನ್ನು ನಿರ್ಮಿಸಿದ್ದಾರೆ. ೨ ಕಾಲುವೆಗಳನ್ನು ವ್ಯವಸಾಯಕ್ಕೆ ಬಳಿಸಿಕೊಳ್ಳಲಾಗುತ್ತಿದೆ. ಇನ್ನೂ ಒಂದು ಕಾಲುವೆ ದುರಸ್ತಿ ಹಂತದಲ್ಲಿದೆ. ಇತ್ತೀಚೆಗೆ ಜಲಾನಯನ ಅಭಿವೃದ್ಧಿ ಸಂಸ್ಥೆಯ ಅಡಿಯಲ್ಲಿ ಈ ಕೆರೆಯು ಒಳಗೊಂಡಿದೆ. ಮುಂದೆ ಕೆರೆಯ ಮೇಲೆ ಭಾಗದಲ್ಲಿರುವ ಪಾರ್ವತಿಗುಡಿಯ ಆವರಣದಲ್ಲಿ ಉದ್ಯಾನವನವನ್ನು ನಿರ್ಮಿಸುವ ಉದ್ದೇಶವನ್ನು ಹೊಂದಲಾಗಿದೆ.

**ಹಿರೂರು ಬಸವೇಶ್ವರ ಕೆರೆ :**

ಹಾನಗಲ್ಲು ಪರಿಸರದ ಪ್ರಾಚೀನ ಕೆರೆಗಳಲ್ಲಿ ಇದು ಕೂಡಾ ಒಂದಾಗಿದೆ. ಹಾನಗಲ್ಲು ಪರಿಸರದಿಂದ ಪಶ್ಚಿಮಕ್ಕೆ ಸುಮಾರು ೮ ಕಿ.ಮೀ. ದೂರದಲ್ಲಿದೆ. ಈ ಕೆರೆಯ ಹತ್ತಿರ ಬಸವಣ್ಣ ದೇವಾಲಯವಿರುವುದರಿಂದ ಬಸವಣ್ಣನಕೆರೆ ಎಂದು ಕರೆಯುತ್ತಾರೆ. ಈ ದೇವಾಲಯವು ಸುಮಾರು ೧೧-೧೨ ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬೇಕು. ಈ ದೇವಾಲಯದಲ್ಲಿ ಬನವಾಸಿಯ ಮಧುಕೇಶ್ವರ ದೇವಾಲಯದಲ್ಲಿರುವ ಬಸವಣ್ಣನ ವಿಗ್ರಹಕ್ಕೆ ಸರಿಸಮಾನವಾದ ವಿಗ್ರಹವಿದೆ. ಅದರಂತೆ ಬಸವನ ವಿಗ್ರಹದ ಗಂಟೆಯ ಮೇಲೆ ಮಧುಕೇಶ್ವರ ದೇವಾಲಯದಲ್ಲಿ ಕೆತ್ತಿದ ವಿಗ್ರಹದ ಶಿಲ್ಪಿಯು ಒಂದೇ ಎಂದು ತಿಳಿಯುತ್ತದೆ. ಅದರಂತೆ ಬಸವೇಶ್ವರ ದೇವಾಲಯದ ಎದುರುಗಡೆ ಸೂರ್ಯನಾರಾಯಣ ದೇವಾಲಯವಿದೆ. ಈ ಮೂರ್ತಿಯು ಸುಂದರವಾಗಿದ್ದು, ಹಾನಗಲ್ಲು ೫೦೦ ಆಡಳಿತ ವಿಭಾಗಗಳಲ್ಲಿ ಈ ಗ್ರಾಮವು ಮಹತ್ವ ಸ್ಥಾನವನ್ನು ಪಡೆದಿತ್ತೆಂಬುದಾಗಿ ತಿಳಿಯುತ್ತದೆ.

ಪ್ರತಿವರ್ಷಕ್ಕೊಮ್ಮೆ ಈ ಊರಿನಲ್ಲಿ ಬಸವೇಶ್ವರ ಜಾತ್ರೆಯನ್ನು ನಡೆಸಲಾಗುತ್ತದೆ. ಈ ಜಾತ್ರೆಯು ಹಾನಗಲ್ಲ ಪರಿಸರದಲ್ಲಿ ನಡೆಯುವ ಪ್ರಮುಖ ಜಾತ್ರೆಗಳಲ್ಲಿ ಒಂದು. ಜಾತ್ರೆಯ ದಿನ ಇಲ್ಲಿನ ಜನರು ಹಾಗೂ ರೈತಾಪಿವರ್ಗ ಕೆರೆಯಲ್ಲಿ ತಮ್ಮ ದನಕರುಗಳನ್ನು ತೊಳೆದು, ಕೆರೆಯ ಅಂಗಳದಿಂದ ಊರಿನ ಜಾತ್ರೆಯ ಬಸವೇಶ್ವರ ದೇವಾಲಯದವರೆಗೆ ರಥವನ್ನು ಎಳೆಯುತ್ತಾರೆ. ನಂತರ ದೇವಾಲಯದಲ್ಲಿ ಬಸವನಿಗೆ ಪೂಜೆ ಸಲ್ಲಿಸಿ ಅನೇಕ ಜನರು ಹರಕೆಯನ್ನು

ಕಟ್ಟಿಕೊಳ್ಳುತ್ತಾರೆ. ಈ ಕೆರೆಯ ಅಂಗಳದಲ್ಲಿ ವೀರಗಲ್ಲು ಇದ್ದು, ಆರನೆಯ ವಿಕ್ರಮಾದಿತ್ಯ ಅರಸನ ಕಾಲದಲ್ಲಿ ತುಟ್ರತ ಛಲದಂಕ ಶೆಟ್ಟಿ ವೀರಮರನದ ಉಲ್ಲೇಖವನ್ನು ತಿಳಿಸುತ್ತದೆ.

ಈ ಕೆರೆಯ ಅಂಗಳದಲ್ಲಿ ಗಜಲಕ್ಷ್ಮೀ ಶಿಲ್ಪದ ತೂಬು ಈಗ ಅದು ಹಾಳಾಗಿದೆ. ಅದರಂತೆ ಕೆರೆಯ ಏರಿಯ ಮೇಲೆ ಕೋಣನ ತಲೆಯ ಕಲ್ಲಿನ ಆಕೃತಿಯನ್ನು ಬಿಡಿಸಿರುವುದು ನಮಗೆ ಕಾಣಿಸುತ್ತದೆ.

ಈ ಕೆರೆಯು ಏರಿಯು ಸುಮಾರು ೧.೫ ಕಿ.ಮೀ ಉದ್ದ ಮತ್ತು ೨೬ ಅಡಿಗಳಷ್ಟು ಎತ್ತರವಿದೆ. ಈ ಕೆರೆಗೆ ಧರ್ಮಾನದಿಯ ಬಲದಂಡೆ ಕಾಲುವೆಯ ಮೂಲಕ ನೀರನ್ನು ಹಾಯಿಸಿದೆ. ಈ ಕೆರೆಗೆ ೨ ತೂಬುಗಳು ಇದ್ದು, ಎರಡು ಕಾಲುವೆಗಳನ್ನು ಹೊಂದಿದೆ. ಈ ಕಾಲುವೆಗಳ ಮುಖಾಂತರ ಜನರು ತಮ್ಮ ಹೊಲದಲ್ಲಿ ಅಡಿಕೆ ಮತ್ತು ಭತ್ತವನ್ನು ಬೆಳೆಯಲು ಉಪಯೋಗಿಸುತ್ತಾರೆ. ಈ ಕೆರೆಯ ಪಶ್ಚಿಮ ದಿಕ್ಕಿಗೆ ಕೋಡಿಯಿದ್ದು,·ಗಡಯಂಕನ ಕಟ್ಟೆ ಎಂಬ ನೀರಾವರಿ ಮೂಲವನ್ನು ಹೊಂದಿದೆ. ಈ ಕೆರೆಯು ಇಲ್ಲಿನ ಜನರು ಕೆರೆಯನ್ನು ಸುಸ್ಥಿತಿಯಲ್ಲಿ ಇಡಲು ಕೆರೆಗೆ ಅನಾದಿ ಕಾಲದಿಂದಲೂ ತಳವಾರರನ್ನು ನೇಮಿಸಿದ್ದಾರೆ.

**ಅರಳೇಶ್ವರ ಕೆರೆ:** ಇದು ಹಾನಗಲ್ಲ ಪರಿಸರದ ಕಂಚಿನೆಗಳೂರು ಹೋಗುವ ಮಾರ್ಗಮಧ್ಯದಲ್ಲಿ ಸುಮಾರು ೧೪ ಕಿ.ಮೀ. ದೂರದಲ್ಲಿದೆ. ಇದು ಗ್ರಾಮದ ಪೂರ್ವ ದಿಕ್ಕಿಗೆ ಇದೆ. ಈ ಕೆರೆಯ ಏರಿಯ ಮೇಲೆ ಕಂದಬೇಶ್ವರ ದೇವಾಲಯವಿರುದರಿಂದ ಕಂದಬರ ಕಾಲದಲ್ಲಿ ಈ ಕೆರೆಯನ್ನು ಕಟ್ಟಲಾಗಿದೆ ಎಂದು ನಮಗೆ ತಿಳಿಯುತ್ತದೆ. ಈ ಕೆರೆಯ ದಂಡೆಯ ಮೇಲೆ ನಮಗೆ ೭ ಶಾಸನಗಳು ನಮಗೆ ಸಿಕ್ಕಿರುವುದು ತಿಳಿಯುತ್ತದೆ.

ಈ ಕೆರೆಯು ಶಾಂತಿವರ್ಮನ ಕಾಲದಲ್ಲಿ ನಿರ್ಮಾಣವಾಗಿರುವ ಸಾಧ್ಯತೆಯಿದೆ. ಕೆರೆಯ ಏರಿಯ ಮೇಲೆ ಕದಂಬೇಶ್ವರ ದೇವಾಲಯದ ತೋರಣದ ಮುಂಭಾಗ ಎಡಮಾಳಿಲ್ ೧೧೦ರ ಅಳಯಿಸಿರಿಮಾನ್ಯರವ ರಾಮಸಿಂಗದಂತಹರಿಂದ ಕಂದಬೇಶ್ವರನ ಪ್ರತಿಷ್ಠಾಪನೆ ಎಂದು ಬರೆಯಿಸಿದೆ. ಈ ಕೆರೆಯ ಆವರಣದಲ್ಲಿ ಬಿದ್ದಿರುವ ಕಂಬಗಳ ಮೇಲೆ 'ಮಲ್ಲಿಕಾರ್ಜನನು ಅಯ್ಯಾ ಬಾಳೆಹೊನ್ನುರಿನಿಂದ ಕಂದಬೇಶ್ವರನಿಗೆ ನಂದಾದೀವಿಗಾಗಿ ಎಳ್ಳುದಾನ' ನೀಡಿದರ ಬಗ್ಗೆ ಉಲ್ಲೇಖ ಇದೆ. ಇದೇ ರೀತಿಯಾಗಿ ಕೆರೆಯ ಏರಿಯ ಮೇಲೆ ನೆಟ್ಟಿರುವ ಇನ್ನೊಂದು ಶಾಸನದಲ್ಲಿ ಕಂದಂಬೇಶ್ವರ ದೇವರನಾಗಿ ಶಾಂತಿವರ್ಮನು ಉಪಾಧ್ಯಾಯನಿಗೆ ದಾನ ನೀಡಿದ ಉಲ್ಲೇಖವಿದೆ.

ಈ ಕೆರೆಯು ಮಳೆಯಾಶ್ರಿತ ಕೆರೆಯಾಗಿದ್ದು, ಇತ್ತೀಚಿನ ದಿನಗಳಲ್ಲಿ ಧರ್ಮ ನದಿಯ ಕಾಲುವೆಗೆ ಕೂಡುವ ಕೆಲಸ ಪ್ರಗತಿಯಲ್ಲಿದೆ. ಈ ಕೆರೆಯ ಉತ್ತರ ದಕ್ಷಿಣಾಭಿಮುಖವಾಗಿದ್ದು ಇದರ ಏರಿಯು ಸುಮಾರು ೨.೫ ಕಿ.ಮೀ ನಷ್ಟು ಉದ್ದವಾಗಿದೆ. ೧೦ ಅಡಿಗಳಷ್ಟು ಎತ್ತರವಾಗಿದೆ ಮತ್ತು ಏರಿಯ ಮೇಲ್ಭಾಗದಲ್ಲಿ ೬ ಮೀಟರನಷ್ಟು ಅಗಲವಿದೆ. ಈ ಏರಿಯ ಮೇಲೆ ಲಭ್ಯವಾದ ಎರಡು ವೀರಗಲ್ಲುಗಳಿವೆ. ಮಣ್ಣಿನಿಂದ ನಿರ್ಮಿತವಾದ ಈ ಏರಿಯ ಒಳಭಾಗವು ಕಲ್ಲುಗಳಿಂದ ರಚನೆಯಾಗಿದ್ದು, ಒಳಭಾಗವು ಇಳಿಜಾರಿನಿಂದ ಕೂಡಿದ್ದು, ಹುಲ್ಲು ಬೆಳೆದಿರುವುದನ್ನು ಕಾಣಬಹುದು.

ಹಾಗೆಯೇ ಈ ಕೆರೆಯಲ್ಲಿ ಪ್ರಮುಖವಾಗಿ ಎರಡು ತೂಬುಗಳನ್ನು ನೋಡುತ್ತೇವೆ. ಈ ತೂಬುಗಳನ್ನು ಪಶ್ಚಿಮ ದಿಕ್ಕಿನ ಏರಿಯ ಸುಮಾರು ೧೦ ಅಡಿಗಳಷ್ಟು ದೂರದಲ್ಲಿ ನಿರ್ಮಿಸಲಾಗಿದೆ. ಊರಿಗೆ ಹೊಂದಿಕೊಂಡಂತೆ ಎರಡು ಕಾಲುವೆಗಳಿವೆ. ಇವುಗಳ ಮೂಲಕ ಅಚ್ಚುಕಟ್ಟು ಪ್ರದೇಶಗಳಿವೆ. ನೀರನ್ನು ಹಾಯಿಸಿ ಅಧಿಕವಾದ ಕೃಷಿಯನ್ನು ಬೆಳೆಯುತ್ತಾರೆ. ಭತ್ತ, ಅಡಿಕೆ, ಎಲೆ ಬಳ್ಳಿ, ಬಾಳೆ ಮುಂತಾದ ಬೆಳೆಗಳಿಗೆ ಬಳಕೆಯಾಗುತ್ತದೆ. ಕೆರೆಯು ೩೨೩.೦೧ ಚ.ಎಂ.ಯಷ್ಟು ನೀರನ್ನು ಸಂಗ್ರಹಿಸುವ ಸಾಮರ್ಥ್ಯ ಹೊಂದಿದ್ದು, ವಿಸ್ತೀರ್ಣವು ೪೨೦ ಹೆಕ್ಟರ್‌ಗಳಷ್ಟು ೪೨೦ ಹೆಕ್ಟರ್‌ಗಳಲ್ಲಿ ಜಲವಿಸ್ತೀರ್ಣವಿದೆ, ೬೦೦ಕ್ಕೂ ಹೆಚ್ಚು ಎಕರೆಯ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಪೂರೈಸುತ್ತದೆ. ಅಲ್ಲದೇ ಮೀನುಗಾರಿಕೆ, ಜಾನುವಾರುಗಳಿಗೆ ಮತ್ತು ಬಟ್ಟೆ ತೊಳೆಯಲು ಉಪಯುಕ್ತವಾಗಿದೆ. ಈ ಕೆರೆಯ ನೀರಾವರಿ ಇಲಾಖೆಯಿಂದ ರಕ್ಷಣೆಯನ್ನು ಪಡೆದಿದ್ದು ಜೀರ್ಣೋದ್ಧಾರವಾಗಿದೆ.

**ಅಕ್ಕಿವಳ್ಳಿಯ: ಹಿರೇಕೆರೆ:**



ಹಾನಗಲ್ಲಿನಿಂದ ನರೇಗಲ್ ಹೋಗುವ ಮಾರ್ಗದಲ್ಲಿ ೭ ಕಿ.ಮೀ ದೂರದಲ್ಲಿದೆ. ಈ ಕೆರೆಯ ಏರಯ ಮೇಲೆ ಕಲ್ಯಾಣ ಚಾಲುಕ್ಯರ ಕಾಲದ ಕಲ್ಮೇಶ್ವರ ದೇವಾಲಯವಿದೆ. ಈ ಕೆರೆಯು ಕಲ್ಯಾಣ ಚಾಲುಕ್ಯರ ಪೂರ್ವದಲ್ಲಿ ಕಟ್ಟಿರಬೇಕು. ಈ ಕೆರೆಯನ್ನು ಇಲ್ಲಿಯ ಜನ ಹಿರೇಕೆರೆ ಎಂದು ಕರೆಯುತ್ತಾರೆ. ಕೆರೆಯ ದಂಡೆಯ ಮೇಲೆ ೨ ಶಾಸನಗಳು ಇದ್ದು, ದಾನ ಕೊಟ್ಟ ಶಾಸನಗಳಿವೆ. ಅವುಗಳು ಈ ರೀತಿಯಾಗಿವೆ. ವೀರಮಲ್ಲದೀಪ ಭುವನೇಶ್ವರ ದೇವಾಲಯ ಸ್ಥಾಪನಾಚಾರ್ಯನಿಗೆ ನೀಡಿ ದಾನ ಮತ್ತೊಂದು ಶಾಸನ ಅಕ್ಕಿವಳ್ಳಿ ಗ್ರಾಮದ ಸೀಮಾ ಸೂಚಕಕಲ್ಲು ಎಂದು ತಿಳಿದಿದೆ. ಇದು ಕೆರೆಯ ಕೋಡಿಯ ಹತ್ತಿರವಿದೆ.

ಈ ಗ್ರಾಮದಲ್ಲಿ ಹೊಲಯನಕಟ್ಟೆ, ಕಸನಕಟ್ಟ ಎಂಬ ಎರಡು ಚಿಕ್ಕ ಕರೆಗಳು ಇದ್ದು, ಇಲ್ಲಿ ಜಾತಿಯಾಧಾತವಾಗಿ ನೀರು ಉಪಯೋಗಿಸುವ ಕ್ರಮದಲ್ಲಿ ಇದ್ದಿರಬೇಕು.

ಈ ಕೆರೆಯ ಆವರಣದಲ್ಲಿ ಬೇಸಿಗೆಯ ಕಾಲದಲ್ಲಿ ವರ್ಷಕ್ಕೆ ಭೂಮಿ ಜನ ಈ ಕೆರೆಯ ಹತ್ತಿರವಿರುವ ಕಲ್ಲಪ್ಪ ದೇವಾಲಯದಲ್ಲಿ ವರ್ಷಕೊಮ್ಮೆ ಪೂರ್ವ ಆಚರಣೆಯನ್ನು ಕೆರೆಯು ಬಂಗಾರವಾಗಿದೆ. ಈ ಕೆರೆಯು ಪೂರ್ವಾಭಿಮುಖವಾಗಿದ್ದು, ೫ ಕಿ.ಮೀ. ನಷ್ಟು ನಿರ್ಮಿತವಾದ ಈ ಏರಿಯ ಒಳಭಾಗದಲ್ಲಿ ಕಲ್ಲಿನಿಂದ ರಚನೆಯಾಗಿದೆ. ಈ ಕೆರೆಗೆ ಮುಖ್ಯವಾಗಿ ಎರಡು ತೂಬಗಳು ಇದ್ದು, ೨ ಕಾಲುವೆಗಳನ್ನು ಹೊಂದಿದೆ. ಇದರಿಂದ ಇಲ್ಲಿಯ ಜನ ವ್ಯವಸಾಯವನ್ನು ನೆಚ್ಚಿಕೊಂಡು ಜೀವನವನ್ನು ಸಾಗಿಸುತ್ತಾರೆ. ಈ ಕೆರೆಯ ೬೦.೬೯ ಒಟ್ಟು ಅಚ್ಚುಕಟ್ಟಿನ ಪ್ರದೇಶವು ೭.೧೧ ಹೆಕ್ಟೇರಗಳನ್ನು ನೀರನ್ನು ವ್ಯವಸಾಯಕ್ಕೆ ಬಳಸಲಾಗುತ್ತದೆ.

**ಮಲ್ಲಿಗಾರ ಕೆರೆ :**

ಹಾನಗಲ್ಲಿನ ಉತ್ತರ ಭಾಗದರುವ ಗ್ರಾಮ ಜಡ್ತಿ ಕಾಲುವೆ ಮುಖಾಂತರ ಹರಿದು ಮಲ್ಲಿಗಾರ ಗ್ರಾಮವನ್ನು ಸೇರುತ್ತದೆ. ಈ ಕೆರೆಗೆ ೨ ತೂಬುಗಳನ್ನು ಹೊಂದಿದ್ದು, ೮.೨ ಹೆಕ್ಟೇರ್‌ಗಳಷ್ಟು ನೀರು ನಿಲ್ಲುವ ಒಳಹರಿವನ್ನು ಹೊಂದಿದ್ದು, ೧೨೦೦೦ ಹೆಕ್ಟೇರ್ ಆಯಕಟ್ಟು ಪ್ರದೇಶಕ್ಕೆ ನೀರು ಒದಗಿಸುತ್ತದೆ. ಈ ಕೆರೆಯ ದಂಡೆಯ ಮೇಲೆ ರಾಷ್ಟ್ರಕೂಟರ ಕಾಲದ ದೇವಾಲಯವಿದ್ದು, ಕಲ್ಯಾಣಿ ಚಾಲುಕ್ಯರ ಕಾಲದ ಶಿವಲಿಂಗವಿದೆ. ಈ ಕೆರೆಯ ಮುಂದೆ ಸಾವಿಕೆರೆಯು ಬಸವೇಶ್ವರ ಕೆರೆಯನ್ನು ಕೂಡಿಕೊಂಡಿದ್ದು, ಮುಂದೆ ಬೈಚವಳ್ಳಿಯ ತಂಗಾಳಿ ಕೆರೆಯನ್ನು ಕೂಡಿಕೊಳ್ಳುತ್ತದೆ. ಈ ಕರೆಯು ಕೂಡಾ ಒಂದು ಸರಪಣಿ ಕೆರೆಯಾಗಿ ನಿರ್ಮಾಣವಾಗುವುದನ್ನು ಕಾಣಬಹುದು.

**ಕಿರುವಾಡಿ ಕೆರೆ:**

ಈ ಗ್ರಾಮವು ಹಾನಗಲ್ಲಿನಿಂದ ೨೨ ಕಿ.ಮೀ. ದೂರದಲ್ಲಿದ್ದು, ೪೨.೧ ಹೆಕ್ಟೇರ್ ನೀರಾವರಿ ಪ್ರದೇಶದ ಒಳಹರಿವನ್ನು ಹೊಂದಿದೆ. ಈ ಕೆರೆಯು ಇತ್ತೀಚೆಗೆ ನವೀಕರಣಗೊಳ್ಳುತ್ತಿದ್ದು, ಕಲ್ಲಿನ ಕಾಲುವೆಗಳ ಮುಖಾಂತರ ನೀರಾವರಿ ವ್ಯವಸ್ಥೆಯನ್ನು ಹೊಲಗಳಿಗೆ ಹಾಯಿಸುತ್ತದ್ದರೆಂದು ನಮಗೆ ಕಂಡುಬರುತ್ತದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕೆರೆಯ ಏರಿಯ ಮೇಲೆ ಒಂದು ವಕ್ಕೈ ಮಾಸ್ತಿ, ತದನಂತರ ಕ್ರಿ.ಶ. ೧೧೭೬ ರಲ್ಲಿ ಚಟ್ಟಿದೇವ

ಹೊರಡಿಸಿದ ಅಪ್ರಕಟಿತ ಶಾಸನ ದೊರೆತಿವೆ. ಈ ಕೆರೆಯು ಪಕ್ಕದ ತಿಳುವಳ್ಳಿ ಕೆರೆಗೆ ಪ್ರಮುಖ ನೀರಾವರಿ ಮೂಲದ ಕೆರೆಯಾಗಿತ್ತೆಂದು ನಮಗೆ ತಿಳಿಯುತ್ತದೆ.

**ಕೂಪ್ಪರಸಿಕೂಪ್ಪ ಹೆತ್ತಲನ ಕಟ್ಟಿಕೆರೆ :** ಇದು ಹಾನಗಲ್ಲ ಪರಿಸರದಿಂದ ೧೨ ಮೀಟರ ದೂರದಲ್ಲಿ ಇದ್ದು ಕಲ್ಯಾಣಿ ಚಾಲ್ಯುಕರ ಕಾಲದಲ್ಲಿ ನಿರ್ಮಿತವಾಗಿರಬೇಕು. ಈ ಕೆರೆಯು ಉತ್ತರ ಕನ್ನಡ ಜಿಲ್ಲೆ ಮತ್ತು ಹಾವೇರಿ ಜಿಲ್ಲೆಯ ಗಡಿಯಾಗಿ ಗುರುತಿಸುತ್ತಾರೆ. ಈ ಕೆರೆಯ ದಂಡೆಯ ಮೇಲೆ ದುರ್ಗಾದೇವಿಯ ಗುಡಿಯಿದೆ. ಇಲ್ಲಿ ವೀರಗಲ್ಲು ಮತ್ತು ಮಾಸ್ತಿಗಲ್ಲುಗಳನ್ನು ಇಡಲಾಗಿದೆ. ಇವು ಕೆರೆಯ ಊಳನ್ನು ಎತ್ತುವಾಗ ಸಿಕ್ಕಿವೆ ಎಂದು ಸ್ಥಳೀಯರು ಹೇಳುತ್ತಾರೆ. ಇವುಗಳನ್ನು ಮಾಸ್ತಿಯಲ್ಲಿ ದೇವರು ಎಂದು ಜನರು ಪೂಜಿಸುತ್ತಾರೆ. ಈ ಕೆರೆಯ ಏರಿಯು ಮುಂಡಗೋಡನಿಗೆ ಹೊಗುವ ಮಾರ್ಗವಾಗಿದೆ. ಉತ್ತಮ ರಸ್ತೆಯನ್ನು ನಿರ್ಮಿಸಿದ್ದಾರೆ ಕೆರೆಯ ನೀರಿನ ಸಂಗ್ರಹ ೦.೧೦೪ ಮೀಲಿಮೀಟರ್ ಆಗಿದ್ದು ೪೭.೬೪ ಅಚ್ಚುಕಟ್ಟನ್ನು ಹೊಂದಿದೆ. ಈ ಕೆರೆಯಲ್ಲಿ ೪೬.೭ ಹೇಕ್ಟರ ಪ್ರದೇಶಕ್ಕೆ ನೀರನ್ನು ಊಣಿಸುತ್ತದೆ. ಈ ಕೆರೆಯಲ್ಲಿ ಮೀನು ಸಾಕಣಿಕ್ಕೆಯನ್ನು ಸ್ಥಳೀಯರು ನಡೆಸುತ್ತಿದ್ದ ಬಂದ ಹಣವನ್ನು ದೇವಸ್ಥಾನದ ಅಭಿವೃದ್ಧಿಗೆ ಬಳಸಲಾಗುತ್ತಿದೆ.

**ಹರಕಟ್ಟಿನ ಕೆರೆ:** ಇದು ಕೂಪ್ಪರಿಗಿ ಕೂಪ್ಪ ಗ್ರಾಮದ ಮೊತ್ತೊಂದು ಸಣ್ಣ ಕೆರೆಯಾಗಿದ್ದು ಈ ಕೆರೆಯ ಜನರ ಹೊಲಗಳಿಗೆ ನೀರು ನೀಡುವಲ್ಲಿ ಉಪಯೋಗವಾಗಿ ಈ ಗ್ರಾಮದ ಪ್ರಮುಖ ಬೆಳೆ ಎಂದರೆ ಮಾವಿನ ತೋಟಗಳು. ಆದ್ದರಿಂದ ಈ ಕೆರೆಯನ್ನು ಸ್ಥಳೀಯರೆ ನಿರ್ಮಿಸಿರಬೇಕು. ಕೆರೆಗೆ ಏರಿಯ ರಸ್ತೆಯು ಮಣ್ಣಿನಿಂದ ಕೂಡಿದ್ದು ಕೆರೆಯ ತೂಬ ಪೂರ್ವ ಭಾಗಕ್ಕೆ ಇದೆ. ಕೆರೆಗೆ ಒಟ್ಟು ಎರಡು ಕಾಲುವೆಗಳು ಇದ್ದು ೦.೧೩ ಮಿಲಿಮೀಟರ್ ನೀರಿನ ಸಂಗ್ರಹಣೆಯನ್ನು ಹೊಂದಿದೆ. ಈ ಕೆರೆಯ ಒಟ್ಟು ಅಚ್ಚುಕಟ್ಟು ಪ್ರದೇಶ ೬೦.೬೯ ಇದರ ಸುಮಾರು ನೀರಿನ ಉಪಯೋಗ ಸುಮಾರು ೭.೧೧ ಹೇಕ್ಟರಗಳಷ್ಟು ಪ್ರದೇಶಕ್ಕೆ ನೀರನ್ನು ಹರಿಸುತ್ತದೆ. ಸ್ಥಳೀಯರು ಈ ಕೆರೆಗೆ ಹರನಕಟ್ಟೆ ಕೆರೆ ಎಂದು ಕರೆಯುತ್ತಾರೆ. ಇಲ್ಲಿ ಯಾವುದೇ ಪ್ರಾಚೀನ ಶಿಲ್ಪಗಳಾಗಿ ಅಥವಾ ವೀರಗಲ್ಲುಗಳಾಗಿ ಕಂಡುಬರುವುದಿಲ್ಲ.

**ದಶರಥ ಕೂಪ್ಪ ತಾಳಿಕೆರೆ :** ಇದು ಹಾನಗಲ್ಲ ಪರಿಸರದಿಂದ ೧೭ ಕಿ.ಲೂ ಮೀಟರ ದೂರದಲ್ಲಿ ಇದೆ. ಈ ಕೆರೆಯ ಗ್ರಾಮದ ಪೂರ್ವ ದಿಕ್ಕೆಗೆ ಗುಡಗುಡಿ ಗ್ರಾಮಕ್ಕೆ ಹೋಗುವ ರಸ್ತೆ ಮಾರ್ಗದಲ್ಲಿ ಇದೆ. ಈ ಕೆರೆಯ ಪ್ರಾಚೀನ ಕೆರೆಯಾಗಿದ್ದ ಕೆರೆಯದಂಡಿಯ ಬಲ ಭಾಗಕ್ಕೆ ಸುಮಾರು ಕ್ರಿ.ಶ. ೧೧ ಅಥವಾ ೧೨ನೇ ಶತಮಾನ ಕಾಲದ ನಶಿಸಿ ಹೋಗುವ ಹಂತದಲ್ಲಿ

ತ್ರಿಕೋಟ ದೇವಾಲಯವಿದೆ. ಸ್ಥಳೀಯರು ಇದ್ದನ್ನು ಭಕ್ತಿ ದೇವರಗುಡಿ ಎಂದು ಕರೆಯುತ್ತಾರೆ. ಈ ದೇವಾಲಯದ ಮತ್ತು ಒಳಗಡೆ ನಂದಿ ಮತ್ತು ನಾಗ ಶಿಲ್ಪಗಳು ಇವೆ ಈ ದೇವಾಲಯದ ಕೆರೆಯ ದಂಡೆಯ ಮೇಲೆ ಕ್ರಿ.ಶ. ೧೨ನೇ ಶತಮಾನಕ್ಕೆ ಸೇರಿದ ಶಾಸನವಿದ್ದು ತ್ರುಟತರವಾಗಿದೆ. ಈ ಶಾಸನದ ಅಲ್ಪ ಭಾಗದಲ್ಲಿ ಸೋಮನಾಥ ದೇವರಿಗೆ ದಾನ ಕೊಟ್ಟ ಬಗ್ಗೆ ಉಲ್ಲೇಖವಿದೆ. ಮತ್ತು ಕೆರೆಯ ಮೇಲೆ ಇರುವ ವೀರಗಲ್ಲಿಗೆ ಪೌರಾಣಿಕ ಕಥೆಯನ್ನು ಹೇಳುತ್ತಾರೆ. ರಾಮಾಯಣದ ಕಥೆಯ ಭಾಗವಾದ ಶ್ರವಣ ಕುಮಾರನು ತನ್ನ ತಂದೆ ತಾಯಿನ್ನು ಕರೆದುಕೊಂಡು ಬಂದಾಗ ನೀರಿನ ದಾಹ ಆಗಿರುತ್ತದೆಯಂತೆ. ಆದ್ದರಿಂದ ಕೆರೆಯ ದಂಡೆಯ ಮೇಲೆ ಇವರನ್ನು ಕುಂದರಿಸಿ ನೀರು ತರಲು ಹೋದಾಗ ಈ ಪ್ರದೇಶವನ್ನು ದಶರಥ ಆಳುತ್ತಿದ್ದನು. ಯಾವುದು ಪ್ರಾಣಿ ಇರಬೇಕು ಎಂದು ಬಾಣ ಬಿಟ್ಟ ಅದು ಶ್ರವಣ ಕುಮಾರನಿಗೆ ಬಿಳುತ್ತದೆಯಂತೆ ಆಗ ಕೆರೆಯ ನೀರು ರಕ್ತದಬಣ್ಣವಾದಾಗ ರಾಜನು ಅವನಲ್ಲಿ ಕ್ಷಮೆಯನ್ನು ಕೇಳುತ್ತಾನೆ. ಆದರೆ ಇದರ ನೋವಿನಿಂದ ಶ್ರವಣ ಕುಮಾರನ ತಂದೆ ತಾಯಿ ರಾಜನಿಗೆ ಕೆರೆಯ ನೀರು ಯಾವಾಗಲು ರಕ್ತ ಬಣ್ಣದಿಂದ ಕೂಡಿರಲಿ ಎಂದು ಶಾಪವನ್ನು ನೀಡುತ್ತಾರೆ ಎಂದು ಸ್ಥಳೀಯರ ಅನಿಸಿಕೆ. ಆದರೆ ಕೆರೆಯ ತಳ ಭಾಗುವ ಕೆಂಪು ಮಣ್ಣಿನಿಂದ ಕೂಡಿದ್ದು ನೀರು ಕೆಂಪಗೆ ಕಾಣುತ್ತಿದೆ.

ಕೆರೆಯು ಕಾಲ ಕಾಲದಿಂದ ಅಭಿವೃದ್ಧಿ ಹೊಂದುತ್ತಾ ಬಂದಿದ್ದು ಈ ಕೆರೆಯು ಇಂದು ಈ ಗ್ರಾಮಕ್ಕೆ ಬಹಳ ಉಪಯುಕ್ತವಾಗಿದೆ ದೇವಸ್ಥಾನ ಎದುರಗಡೆ ರೈತರ ಜಮೀನು ಇದ್ದು ಇಲ್ಲಿ ಭತ್ತವನ್ನು ಬೆಳೆಯುತ್ತಾರೆ. ಈ ಕೆರೆಯ ನೀರಿನ ಒಟ್ಟು ಸಂಗ್ರಹ ೨.೫೨ ಮೀಟರ ಆಗಿದ್ದು ೧೧೬ ಎಕರೆ ಅಚ್ಚುಕಟ್ಟ ಪ್ರದೇಶವನ್ನು ಹೊಂದಿದೆ. ಈ ಕೆರೆಯಿಂದ ಸುಮಾರು ೩೩.೯೫ ಹೆಕ್ಟರನ್ನಷ್ಟು ಪ್ರದೇಶಗಳಿಗೆ ನೀರು ಉಪಯೋಗಿಸುತ್ತಾರೆ.

**ಜಂಗಲಿ ಕಟ್ಟಿ ಕೆರೆ:** ಈ ಕೆರೆಯು ಗ್ರಾಮದ ಪೂರ್ವ ಭಾಗಕ್ಕೆ ಮುಂಡಗೋಡಗೆ ಹೋಗುವ ಮಾರ್ಗದಲ್ಲಿ ಕಂಡು ಬರುತ್ತದೆ. ಕೆರೆಯ ಸುತ್ತ ಮುತ್ತಲಿನ ಬಾಗ ಉತ್ತರಕನ್ನಡ ಜಿಲ್ಲೆಯ ಅರಣ್ಯ ಇಲಾಖೆ ಸೇರಿದ್ದು ಕಾಡಿನಿಂದ ಕೂಡಿದೆ ಸ್ಥಳೀಯರ ಪ್ರಕಾರ ಕಾಡಿಗೆ ಜಂಗಲ್ ಎನ್ನುವುದರಿಂದ ಜನರು ಕೂಡಾ ಜಂಗಲಿ ಕಟ್ಟಿಯ ಕೆರೆ ಎಂದು ಕರೆಯುತ್ತಾರೆ. ಈ ಕೆರೆಯ ಏರಿಯ ಮಣ್ಣಿನಿಂದ ಕೂಡಿದ್ದು ಕೆರೆಯ ಪಶ್ಚಿಮ ಭಾಗಕ್ಕೆ ತೂಬುವಿದೆ ಗ್ರಾಮದ ತಾಳಿಕೆರೆಯಿಂದ ಬಂದ ನೀರು. ಇಲ್ಲಿ ಸಂಗ್ರಹವಾಗುತ್ತದೆ. ಕೆರೆಗೆ ಒಟ್ಟು ನೀರಿನ ಸಾಮ್ಯರ್ಥ ೭೦ ಮೀಟರಗಳಷ್ಟು ಎದ್ದವಿದ್ದು ೬.೫೧ ಹೇಕ್ಟರ ಅಚ್ಚುಕಟ್ಟ ಹೊಂದಿದೆ. ಈ ಕೆರೆಯ

ನೀರಾವರಿ ಪ್ರದೇಶ ೧.೨೯ ಹೇಕ್ಟರಗಳಷ್ಟು ಪ್ರದೇಶಗಳಿಗೆ ನೀರು ಉಣಿಸುತ್ತಾವೆ. ಈ ಕೆರೆಯನ್ನು ಜನರಿಗಿಂತ ಜಾನುವಾರುಗಳೆ ಹೆಚ್ಚಾಗಿ ಅವಲಂಬಿತವಾಗಿದ್ದು ಕಾಡಿನ ಪ್ರಾಣಿಗಳು ಮತ್ತು ದನ ಕರುಗಳು ನೀರು ಕುಡಿಯಲು ಉಪಯೋಗವಾಗುತ್ತದೆ.

**ಅಕ್ಕವಳಿಯ ಹೂಲೆಯನ ಕೆರೆ:** ಇದು ಗ್ರಾಮದ ಕಾಲುವೆ ಯಲ್ಲಾಪುರ ಮಾರ್ಗದಲ್ಲಿ ಕಂಡು ಬರುತ್ತದೆ. ಸ್ಥಳಿಯರು ಇದ್ದನ್ನು ಹೊಲೆಯನ ಕೆರೆ ಎಂದು ಕರೆಯುತ್ತಾರೆ. ಈ ಕೆರೆಯ ಮೇಲೆ ಯಾವುದೇ ಶಾಸನಗಳು ಮತ್ತು ವೀರಗಲ್ಲುಗಳು ಕಂಡು ಬರುವುದಿಲ್ಲ ಕೆರೆಯ ಏರಿಯು ಸಂಪೂರ್ಣ ಕಾಂಕ್ರೀಟನಿಂದ ಕೂಡಿದೆ ಕೆರೆಯನ್ನು ಪ್ರಾಚೀನ ಎಂಬುದು ಗುರುತಿಸಲು ಸಾಧ್ಯವಾಗದೇ ಇದ್ದರು ಊರಿನ ಮತ್ತೊಂದು ಹಳೆಯ ಕೆರೆಗೆ ಸಂಬಂಧವಿದೆ ಎಂದು ಹೇಳಬಹುದು ಈ ಕೆರೆಯ ಏರಿಯು ೧೩೦ ಮೀಟರ್ ಉದ್ದವಾಗಿವೆ ೬೦.೬೯ ಹೇಕ್ಟರ್‌ಗಳಷ್ಟು ಅಚ್ಚುಕಟ್ಟು ಪ್ರದೇಶ ಹೊಂದಿದೆ. ಈ ಕೆರೆಯ ಸುಮಾರು ೭.೧೧ ಹೇಕ್ಟರ ಪ್ರದೇಶಗಳಿಗೆ ನೀರನ್ನು ಒದಗಿಸುತ್ತಿದೆ.

**ಸಮ್ಮಸಗಿ ಕೂಡಗಿ ಕೆರೆ:** ಈ ಗ್ರಾಮವು ಹಾನಗಲ್ಲ ಪರಿಸರದಿಂದ ಪಶ್ಚಿಮಕ್ಕೆ ಸಿರ್ಸಿಗೆ ಹೋಗು ಮಾರ್ಗದಲ್ಲಿ ಬರುತ್ತದೆ. ಗ್ರಾಮದ ಪೂರ್ವ ಭಾಗಕ್ಕೆ ಈ ಕೆರೆ ಕಂಡುಬರುತ್ತದೆ. ಈ ಕೆರೆಯ ಹತ್ತಿರ ಕಲ್ಯಾಣ ಚಾಲ್ಯುಕರ ಶೈಲಿಯ ಈಶ್ವರನ ಗುಡಿಯೆಂದು ಕೆರೆಯ ಕಾಲಮಾನ ಕ್ರಿ.ಶ. ೧೧ ಅಥವಾ ೧೨ನೇ ಶತಮಾನದ್ದು ಎಂದು ಹೇಳಬಹುದು. ಕೆರೆಯ ಏರಿಯ ೫ ವರೆ ಅಡಿ ಎತ್ತರವಿದೆ. ೨೩೬ ಹೇಕ್ಟರ ಅಚ್ಚುಕಟ್ಟು ಹೊಂದಿದೆ. ಈ ಕೆರೆಯ ೬.೧೭ ಹೇಕ್ಟರಗಳಷ್ಟು ನೀರಾವರಿ ಭೂ ಪ್ರದೇಶವನ್ನು ಹೊಂದಿದೆ. ಈ ಕೆರೆಯ ತಳಭಾಗದಲ್ಲಿ ಭತ್ತವನ್ನು ಬೆಳೆಯಲಾಗುತ್ತಿದ್ದು ಇತ್ತೀಚಿನ ವರ್ಷಗಳಲ್ಲಿ ಶುಂಠಿಯು ಪ್ರಮುಖ ಬೆಳೆಯಾಗಿದೆ. ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಸ್ಥಳೀಯ ಹೇಳುವ ಪ್ರಕಾರ ಈ ಕೆರೆ ಏರಿಯ ಮೇಲೆ ಶಿವಲಿಂಗವಿದ್ದು ಹತ್ತಿರದ ಈಶ್ವರನ ಗುಡಿಯಲ್ಲಿ ಇಟ್ಟಿದ್ದಾರೆ. ಅದನ್ನೇ ಬಿಟ್ಟರೆ ಕೆರೆಯ ಮೇಲೆ ಯಾವುದೇ ಪ್ರಾಚೀನ ಅವಶೇಷ ಕಂಡು ಬರುವುದಿಲ್ಲ.

**ಸಣ್ಣಕೆರೆ:** ಸಮ್ಮಸಗಿ ಗ್ರಾಮದಲ್ಲಿ ಕಂಡುಬರುವ ಮತ್ತೊಂದು ಕೆರೆ ಕೆರೆಯ ಉತ್ತಮ ಸ್ಥಿತಿಯಲ್ಲಿ ಇದ್ದು ಮಣ್ಣಿನ ಏರಿಯನ್ನು ಹೊಂದಿದೆ. ಸ್ಥಳೀಯರು ಇದನ್ನು ದನಕರುಗಳ ನೀರಿಗೆ ಬಳಸುತ್ತಾರೆ. ಈ ಗ್ರಾಮದ ಪ್ರಸಿದ್ಧ ರೇಣುಕಾ ದೇವಿ ಗುಡಿಯಿದ್ದು ಪ್ರವಾಸಿಗರು ಕೆರೆಯ ದಂಡೆಯ ಮೇಲೆ ನಿಂತು ಆಹಾರವನ್ನು ತಯಾರಿಸಿಕೊಂಡು ನಂತರ ದೇವಿಗೆ ಸರ್ಮಪಿಸಿ ಒಂತಿರುಗುತ್ತಾರೆ. ಈ ಕೆರೆಯು ಮಳೆಯಾಶ್ರಿತವಾಗಿದ್ದು ಬೇಸಿಗೆಯಲ್ಲಿ ನೀರಿಲ್ಲದೆ ಬತ್ತುತ್ತದೆ.

**ಸುರುಳೀಶ್ವರ ಕೆರೆ :** ಈ ಗ್ರಾಮವು ಹಾನಗಲ್ಲದಿಂದ ಹಾವೇರಿಗೆ ಹೋಗುವ ಮಾರ್ಗದಲ್ಲಿ ಪೂರ್ವಕ್ಕೆ ೮ ಕಿಲೂ ಮೀಟರ ಒಳಗಡೆ ಇದೆ. ಇಲ್ಲಿಯ ಕೆರೆ ೧೧ ನೇ ಶತಮಾನದಲ್ಲಿ ನಿರ್ಮಾಣವಾದ ಕೆರೆ ಇದೆ. ಈ ಕೆರೆಯ ದಂಡೆಯ ಮೇಲೆ ವೀರಗಲ್ಲು ಮತ್ತು ಗೋಸಾಯಿ ಕಲ್ಲುಗಳು ಕಂಡು ಬರುತ್ತವೆ. ಆದರೆ ಅವು ಭಗ್ನಗೊಂಡಿದೆ. ಈ ಕೆರೆಯ ದಂಡೆಯ ಮೇಲೆ ಹಂಚಿನ ಈಶ್ವರ ಗುಡಿ ಇದೆ. ಈ ಗುಡಿಯಲ್ಲಿ ಪ್ರಾಚೀನ ಶಿವಲಿಂಗವಿದ್ದು ಇಲ್ಲಿ ಹಳೇಯ ದೇವಸ್ಥಾನ ವಿರಬೇಕು. ಹಾಗೂ ಈ ಗುಡಿಯ ಬಲಭಾಗಕ್ಕೆ ವಿಶಾಲವಾದ ಕೆರೆ ಇದ್ದು ಇದನ್ನು ಗ್ರಾಮದವರು ದೊಡ್ಡ ಕೆರೆ ಎಂದೇ ಕರೆಯುತ್ತಾರೆ. ಈ ಕೆರೆಯ ಕಾಲ ಕಾಲಕ್ಕೆ ಅಭಿವೃದ್ಧಿ ಹೊಂದಿದ್ದು ಕೆರೆಯು ಇಂದು ನೋಡಲು ಆಕರ್ಷಣಿಯವಾಗಿದೆ. ಕೆರೆಯ ಧರ್ಮಾ ಕಾಲುವೆಯ ಮುಂಖಾಂತರ ನೀರನ್ನು ತುಂಬಿಸುತ್ತಿದ್ದು ನೀರು ಯಾವಾಗಲು ಸಂಗ್ರಹವಾಗಿರುತ್ತದೆ.

ಈ ಕೆರೆಯು ಏರಿಯು ೧೫ ಅಡಿ ಎತ್ತರವಾಗಿದ್ದು ಕೆರೆಯ ರಸ್ತೆಯು ೨೦ ಅಡಿ ಅಗಲವಾಗಿದೆ. ಈ ಕೆರೆಯ ಸುಮಾರು ೧೫ ಹೇಕ್ಟರ ಅಚ್ಚುಕಟ್ಟು ಪ್ರದೇಶವೆಂದು ಹೇಳುತ್ತಾರೆ. ಈ ಕೆರೆಯ ನೀರಾವರಿಯ ಸಾಮರ್ಥ್ಯ ಸುಮಾರು ೨೫ ಹೇಕ್ಟರಗಳಷ್ಟು ಹೊಂದಿದೆ. ಕೆರೆಗೆ ಒಟ್ಟು ೩ ತೂಬಗಳಿದ್ದು ೪ ಕಾಲುವೆಗಳ ಮುಖಾಂತರ ಹೊಲಗಳಿಗೆ ನೀರನ್ನು ಸರಬರಾಜು ಮಾಡುತ್ತಾರೆ. ಭತ್ತ ಇಲ್ಲಿ ಪ್ರಮುಖ ಬೆಳೆ ಈ ಸುತ್ತಮುತ್ತಲಿನ ರೈತರು ಇದೇ ಕೆರೆಯ ನೀರಿನ ಮೇಲೆ ಬೆಳೆಯನ್ನು ಬೆಳೆಯುತ್ತಾರೆ. ಇದನ್ನು ಭತ್ತ ಕಣಜ ಕ್ಷೇತ್ರವೆಂದು ಕರೆಯುತ್ತಾರೆ ಇದರ ಕೂಡಿಯ ನೈರುತ್ಯಕ್ಕೆ ಇಡಲಾಗಿದೆ.

**ಜಲ್ಲಿಕಟ್ಟಿ ಕೆರೆ :**

ಈ ಕೆರೆಯ ಗ್ರಾಮದಿಂದ ಹಾವೇರಿಗೆ ಹೋಗುವ ಮಾರ್ಗದಲ್ಲಿ ಸಿಗುತ್ತದೆ. ಈ ಕೆರೆಯು ಆಧುನಿಕವಾಗಿದ್ದು ಸ್ಥಳೀಯರು ಇದ್ದನ್ನು ಜಲ್ಲಿ ಕಟ್ಟಿ ಕೆರೆ ಎಂದು ಕರೆಯುತ್ತಾರೆ. ಕೆರೆಯ ಏರಿಯು ಮಣ್ಣಿನಿಂದ ಕೂಡಿದ್ದು ಸಣ್ಣ ನೀರಾವರಿ ಇಲಾಖೆಯವರು ಅಭಿವೃದ್ಧಿ ಮಾಡುವ ನಿಟ್ಟಿನಲ್ಲಿ ಕೆಲಸ ಸಾಗಿದೆ. ಕೆರೆಯ ತಳಬಾಗ ಪಾಳು ತುಂಬಿದು. ಮಳೆಗಾಲದಲ್ಲಿ ನೀರು ನಿಲ್ಲುವುದು ಕಷ್ಟ ಆದ್ದರಿಂದ ಈ ಕೆರೆಯನ್ನು ನೀರನ್ನು ಬೇಸಿಗೆಯಲ್ಲಿ ಬಳಸುವುದು ಕಷ್ಟ ಇನ್ನು ಮುಂದೆ ಇಲಾಖೆ ಕೈ ಹಾಗೂ ಸ್ಥಳೀಯರು ಕೈಗೂಂಡ ಯೋಜನೆ ಉಪ್ಪಸ್ಥಿತಿಯಲ್ಲಿ ನೀರಾವರಿಗೆ ಬರಪಿಲ್ಲವೆನ್ನಬಹುದು. ಕೆರೆಯು ಏರಿಯ ೦.೦೦೮ ಮೀಟರ ಇದ್ದು ೨

ತೂಬುಗಳನ್ನು ಹೊಂದಿದೆ. ತೂಬುಗಳ ಮುಂಖಾಂತರ ೬.೫೧ ಹೇಕ್ಟರನಷ್ಟು ಭೂಮಿಗೆ ನೀರಾವರಿ ಸೌಲಭ್ಯವನ್ನು ಒದಗಿಸುತ್ತಿವೆ.

**ಉಪ್ಪಣಸಿ ಮಹಾಜನಕಟ್ಟಿ ಕೆರೆ:** ಈ ಗ್ರಾಮವು ಹಾನಗಲ್ಲ ಪರಿಸರದಿಂದ ಆಗ್ನೇಯಕ್ಕೆ ಸುಮಾರು ೩೫ ಕಿ.ಮೀ ದೂರದಲ್ಲಿ ಇದ್ದು ಈ ಕೆರೆಯು ಪ್ರಾಚೀನ ಕಾಲದ ಕೆರೆಯಾಗಿದೆ. ಈ ಕೆರೆಯು ೧೨ನೇ ಶತಮಾನಕ್ಕಿಂತ ಮುಂಚೆ ಇತ್ತು ಎಂದು ಹೇಳಬಹುದು. ಈ ಕೆರೆಯು ಸುಸ್ಥಿತಿಯಲ್ಲಿ ಇದ್ದು ಕೆರೆಯ ಏರಿಯ ಮೇಲೆ ಕಲ್ಲೇಶ್ವರ ಗುಡಿ ಇದೆ. ಮತ್ತು ಕೆರೆಯ ಏರಿಯ ಮೇಲೆ ಶಾಸನವಿದೆ. ಈ ಶಾಸನದಲ್ಲಿ ಇಮ್ಮಡಿ ಜಯಸಿಂಹನ ಬನವಾಸಿಯ ೧೨೦೦೦ ಮಾಂಡಲಿಕ ಕುಂದುರಾಜನ ಮಹಾದೇವಿಯು ಕಲ್ಲೇಶ್ವರ ದೇವಾಲಯದ ಮಠಕ್ಕೆ ದಾನ ನೀಡಿದ್ದಾನೆ[೨೨] ಮತ್ತು ಏರಿಯ ಕಟ್ಟೆಯ ಹತ್ತಿರ ಎರಡು ವೀರಗಲ್ಲುಗಳು ಇದ್ದು ಊರಿನ ಹೋರಾಟಕ್ಕೆ ಜೀವ ತ್ಯಾಗ ಮಾಡಿದ ಭೂಮಿ ನಾಯಕ ಮತ್ತು ದಾಸಣ್ಣನ ಸ್ಮಾರಕಗಳಾಗಿವೆ. ಈ ಕೆರೆಗೆ ಸ್ಥಳೀಯರು ಮಹಾ ರಾಜನ ಕಟ್ಟಿ ಮಹಾಜನಕಟ್ಟಿ ಎಂದು ಕರೆಯುವುದು ಉಂಟು ಆದರೆ ಕುಂದುರಾಜನ ದೇವರೆ ಮಹದೇವಿಯ ಇದು ಮಹಾಜನಕಟ್ಟಿ ಆಗಿರಬೇಕು.

ಕೆರೆಯ ಈಗಿನ ಸ್ಥಿತಿಯಲ್ಲಿ ಉತ್ತಮವಾಗಿದ್ದು ಕೆರೆಯ ಏರಿಯ ಡಾಂಬರೀಕರಣ ರಸ್ತೆಯನ್ನು ಮಾಡಿದ್ದಾರೆ. ಕೆರೆಯ ಏರಿಯು ೦.೩.೧೧ ಮೀಟರಗಳಷ್ಟಿ ಉತ್ತರವಿದ್ದು ೨೦ ಹೇಕ್ಟರ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದೆ. ಕೆರೆಗೆ ಇದ್ದು ಪೂರ್ವಕ್ಕೆ ಕೋಡಿಯನ್ನು ಸಿಮೆಂಟನಿಂದ ಕಟ್ಟಲಾಗಿದೆ ಈ ಕೆರೆಗೆ ೨ ತೂಬುಗಳು ಇದ್ದು ಇದರ ಮುಖಾಂತರ ೨.೩೫ ಹೇಕ್ಟರ ನೀರಾವರಿ ಸೌಲಭ್ಯವನ್ನು ಹೊಂದಿದೆ. ಈ ಕೆರೆಗೆ ಗ್ರಾಮದಲ್ಲಿ ಮತ್ತೇರುಡು ಕೆರೆಯನ್ನು ಹೊಂದಿದೆ.

**ಮಕರವಳ್ಳಿಯ ದೊಡ್ಡಕೆರೆ:**

ಹಾನಗಲ್ಲು ಪರಿಸರದಿಂದ ೧೪ ಕಿ.ಮೀ. ದೂದಲ್ಲಿರುವ ಶಿವಮೊಗ್ಗ ಶಿರ್ಶಿಯನ್ನು ಕೊಡುವ ಗಡಿಗ್ರಾಮ ಈ ಗ್ರಾಮದ ಪಶ್ಚಿಮಕ್ಕೆ ದೊಡ್ಡಕೆರೆ ಇದೆ. ಇದು ಸುಮಾರು ೧೧ ಅಥವಾ ೧೨ ನೇ ಶತಮಾನದಲ್ಲಿ ನಿರ್ಮಾಣವಾಗಿರಬಹುದು. ಈ ಕರೆಯು ಮಳೆ ಆಶ್ರಿತವಾಗಿದ್ದು ಉತ್ತರಕ್ಕೆ ಮುಖವಾಗಿದೆ. ಕೆರೆಯು ಸುಮಾರು ೧ ಕಿ.ಮಿ. ಮೀಟರ ಉದ್ದವಾಗಿದ್ದು ಏರಿಯು ೧೦ ಮೀಟರ ಇದೆ. ಏರಿಯ ಮೇಲ್ಭಾಗ೨೦ ಅಡಿ ಅಗಲದ ರಸ್ತೆಯಿದೆ. ಕೆರೆಯು ಪೂರ್ವ ಭಾಗಕ್ಕೆ ಕೆರೆಯಕೋಡಿ ಇದೆ. ಈ ಕೆರೆಗೆ ೨ ತೊಟುಗಳು ಇದು

೩.೫ ಎಕರೆ ಅಚ್ಚುಕಟ್ಟು ಪ್ರದೇಶವನ್ನು ಹೊಂದಿದ್ದು ೫.೬ ಹೆಕ್ಟೇರ ನೀರಾವರಿ ಸೌಲಭ್ಯವನ್ನು ಹೊಂದಿದೆ.

ಈ ಕೆರೆಯ ವಿಶೇಷವನೆಂದರೆ ಸಹಸ್ರಾರು ಪಕ್ಷಿಗಳ ಆಶ್ರಯತಾಣವಾಗಿದೆ. ಇಲ್ಲಿ ವಿವಿಧ ದೇಶದ ವಿವಿಧ ಪ್ರಬೇಧದ ಹಕ್ಕಿಗಳು ಡಿಸೆಂಬರ್ ಜನೇವರಿ ತಿಂಗಳವರೆಗೆ ಇಲ್ಲಿ ಸಂತಾನ ಅಭಿವೃದ್ಧಿಗೆ ವಲಸೆ ಬರುತ್ತವೆ. ಈ ಕೆರೆಯನ್ನು ಆಶ್ರಿಯಿಸುವ ಮುಖ್ಯ ಪಕ್ಷಿಗಳೆಂದರೆ ಉಳ್ಳುಂಗ್ ಐಬೀಸು ಬ್ರಾಹ್ಮನಿಬಾತು ಕೊಕ್ಕರೆ, ಬೆಳ್ಳಕ್ಕಿ ಬಕ, ಭಾತು ಹೆಬ್ಬಾತು ಮುಂತಾದ ಪ್ರಬೇಧಗಳು ಇವೆ. ಈ ಕೆರೆಯ ಸುತ್ತಣ ಪ್ರದೇಶ ಬಹಳ ಸುಂದರವಾಗಿದ್ದು ಒಳ್ಳೆಯ ಪ್ರವಾಸಿ ತಾಣವನ್ನು ಮಾಡಲು ಜಿಲ್ಲಾಡಳಿತ ಮುಂದಾಗಬೇಕಾಗಿದೆ. ಇಲ್ಲಿಯ ಅರಣ್ಯ ಇಲಾಖೆ ಹೇಳುವ ಪ್ರಕಾರ ಚಳಿಗಾಲದಲ್ಲಿ ಉತ್ತರ ಏಷ್ಯಾ ಇರೋಪ ಖಂಡಗಳಿಂದ ಹಿಮದ ಬಿಸಿ ತಾಳಲಾರದೆ ಉಷ್ಣ ಉಪ್ರದೇಶಗಳಿಗೆ ವಲಸೆ ಬರುತ್ತವೆ. ಇವುಗಳ ಪೈಕಿ ಸೂಜಿ ಬಾತು ವರ್ಣರಂಜಿತ ಬಾತು, ಶಾವೆಲ್ಲರ್, ಗಾರ್ಗಿನಿ, ನೀಲರಕ್ಕ ಟೇಲು ಪೂಜಾರ್ಡಗಳು ಕಂಡುಬರುತ್ತವೆ. ಮಳೆಗಾಲದ ಕಾಲನುಕ್ರಮ ಅನುಸರಿಸಿ ಸುಮಾರು ೫ ರಿಂದ ೧೦೦೦೦ ಸಂಖ್ಯೆಯಲ್ಲಿ ಸುಮಾರು ೫೦ ಜಾತಿಯ ವಿವಿಧ ಪಕ್ಷಿಗಳು ಇಲ್ಲಿ ಆಶ್ರಯ ಪಡೆಯುತ್ತವೆ.

**ಕೆಲಗೇರಿಯ ಕೆರೆ :** ಈ ಕೆರೆಯು ಗ್ರಾಮದ ಪೂರ್ವ ಭಾಗದಲ್ಲಿ ಗೊಂದಿಗೆ ಹೋಗುವ ಮಾರ್ಗದಲ್ಲಿ ಸಿಗುತ್ತದೆ. ಈ ಕೆರೆಯ ೧೧ ನೇ ಶತಮಾನಕ್ಕೂ ಮುಂಚಿನದು ಇರಬೇಕು. ಈ ಕೆರೆಯ ಹತ್ತಿರ ಗರುಡು ಕಂಬ ಇದೆ. ಮೊದಲನೇ ಶಾಸನದಲ್ಲಿ ಹರಿಹರದ ಅರಸ ಗೋವೆಯ ಪ್ರಧಾನಿ ಬಾಚಣ್ಣ ಒಡೆಯನಿಂದ ನರಸಿಂಹದೇವರಿಗೆ ಮಕರವಳ್ಳಿ ಪುರದಾನ ಎಂಬ ಬಾಗ ಮಾತ್ರ ಕಾಣಿಸುತ್ತದೆ.[೨೨] ಮತ್ತೊಂದು ಸ್ಮಾರಕ ಎಂದರೆ ವೀರಗಲ್ಲು ಇದು ತ್ರಿಟಿತ್ರವಾಗಿದ್ದು ಅದರಲ್ಲಿ ಒಬ್ಬ ಗೌಡನ ಮಗ ಮಾದೆಯನ ವೀರಮರಣ ಹೊಂದಿದ ಬಗ್ಗೆ ತಿಳಿಸುತ್ತದೆ. ಕೆರೆಯ ರಚನಾ ವಿಧಾನ ಒರಟ್ಟ ಕಲ್ಲಿನ ಗೋಡೆಯಿಂದ ಕೂಡಿದ್ದು ೧ ತೂಬು ಹೊಂದಿದೆ. ನೀರು ನೀಲ್ಲುವ ಅಚ್ಚುಕಟ್ಟು ಪ್ರದೇಶ ೧೬ ಹೇಕ್ಟರ ಇದ್ದು ೧೦ ಅಡಿಗಳಷ್ಟು ನೀರು ನಿಲ್ಲುತ್ತದೆ. ಸುಮಾರು ೫.೩ ಹೇಕ್ಟರಗಳಷ್ಟು ನೀರಾವರಿ ಪ್ರದೇಶಕ್ಕೆ ನೀರನ್ನು ಉಣಿಸುತ್ತದೆ. ಈ ಕೆರೆಯ ನೀರನ್ನು ಬಳಸಿ ತರಕಾರಿ ಹಾಗೂ ಮೆಕ್ಕಿ ಜೋಳವನ್ನು ಬೆಳೆಯುತ್ತಾರೆ. ಸ್ಥಳೀಯವಾಗಿ ಇದನ್ನು ಕೆಲಕೆರಿ ಎಂದು ಕರೆಯುತ್ತಾರೆ.

**ಹಾವಣಗಿಯ ಹಿರೆಕೆರೆ:** ಈ ಗ್ರಾಮವು ಹಾನಗಲ್ಲ ಪರಿಸರದಿಂದ ೧೭ ಕಿ.ಮೀ. ಮೀಟರ ದೂರದಲ್ಲಿ ಇದ್ದು ಹಾವಣಗಿಯಿಂದ ಪೂರ್ವ ಭಾಗದಲ್ಲಿ ಇದೆ. ಕೆರೆಯನ್ನು ಸ್ಥಳೀಯರು

ಪಿರೆಕೇರಿ ದೊಡ್ಡಕೇರೆ ಊರ ಹೊರಗಿನ ಕೆರೆಯೆಂದು ಹೇಳುತ್ತಾರೆ. ಕೆರೆಯು ಬಹುಷ ೧೧ ನೇ ಶತಮಾನಕ್ಕಿಂತಲೂ ಮೊದಲೆ ಇರಬೇಕು. ಕೆರೆಯ ದಂಡೆಯ ಮೇಲೆ ಇರುವ ವೀರಗಲ್ಲು ಮತ್ತು ಮಾಸ್ತಿಗಲ್ಲಿನಿಂದ ತಿಳಿಯಬಹುದು. ಈ ಶಿಲ್ಪಗಳನ್ನು ಗ್ರಾಮದ ಈಶ್ವರ ದೇವಾಲಯದ ಮುಂಭಾಗ ತಂದು ಇಡಲಾಗಿದೆ.

ಕೆರೆಯ ಏರಿಯ ರಸ್ತೆಯು ಡಾಂಬರಿಕರಣವಾಗಿದ್ದು, ೨೦ ಅಡಿ ಅಗಲದ ರಸ್ತೆಯಿದೆ. ಏರಿಯು ೦.೧೧೯ ಮೀಟರ್ ಎತ್ತರವಿದ್ದು ೫೬ ಹೆಕ್ಟೇರ್ ಅಚ್ಚಕಟ್ಟು ಪ್ರದೇಶವನ್ನು ಹೊಂದಿದೆ. ಕೆರೆಯು ೬.೮೭ ಹೆಕ್ಟೇರ್ ಪ್ರದೇಶಕ್ಕೆ ವ್ಯವಸಾಯದ ನೀರನ್ನು ಹೊದಗಿಸುತ್ತದೆ. ಕೆರೆಗೆ ೪ ತೂಬುಗಳಿದ್ದು ೨ ತೂಬುಗಳು ದುರಸ್ಥಿ ಹಂತದಲ್ಲಿದೆ. ಉಳಿದ ಇನ್ನೆರಡು ತೂಬುಗಳ ಮುಖಾಂತರ ಕೆರೆಯ ಬಲಭಾಗದಲ್ಲಿರುವ ಹೊಲಗಳಿಗೆ ನೀರನ್ನು ಹರಿಸುತ್ತದೆ. ಕೆರೆಯ ಉತ್ತರಕ್ಕೆ ಕೋಡಿ ಇದ್ದು ಹೊಸದಾಗಿ ಕಟ್ಟಿಸಿದ್ದಾರೆ. ಈ ಕೆರೆಗೆ ಧರ್ಮಾಕಾಲುವೆ ಮುಖಾಂತರ ನೀರಾವರಿ ಯೋಜನೆಯನ್ನು ಜಾರಿಗೆ ತರುವ ಮುಖಾಂತರ ಕೆರೆಯನ್ನು ೧೨ ತಿಂಗಳು ತುಂಬಿರುವಂತೆ ನೋಡಿಕೊಳ್ಳುತ್ತಾರೆ.

**ಅಡಿಟಿಪ್ಪಣಿಗಳು :**

೧. ಜಿ.ಎಸ್. ದಿಕ್ಷೀತ್ ಜಿ.ಆರ್. ಕುಪ್ಪಸ್ವಾಮಿ ೨೦೦೦ ಕರ್ನಾಟಕದಲ್ಲಿ ಕೆರೆ ನೀರಾವರಿ ಅನುವಾದ

ನೀಲತ್ ಹಳ್ಳಿಕಸ್ತೂರಿ ಕ.ವಿ.ವಿ. ಹಂಪಿ. ಪುಟ–೨೬–೧೦೪.

೨. ಸಿ.ಎಸ್. ವಾಸುದೇವನ್ ೨೦೦೧ ಹಂಪಿ ಪರಿಸರದ ಕೆರೆಗಳು ಪುಟ–೧.

೩ .ಅದೇ ಹಂಪಿ ಪರಿಸರದ ಕೆರೆಗಳು ಪುಟ–೪–೫.

೪. ವಾಸುದೇವ ಬಡಿಗೇರ (ಹಾನಗಲ್ಲು) ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲಿಕೆ ಇಸ್ವಿ

೨೦೦೮ ಪುಟ–೮೦.

೫. ಎಂ.ಎಂ. ಕಲಬುರ್ಗಿ. ಧಾರವಾಡ ಜಿಲ್ಲಾ ಶಾಸನ ಸೂಚಿ. ೧೯೭೫. ಕ.ವಿ.ವಿ. ಧಾರವಾಡ.

ಪುಟ ಸಂ. ೫೮.

೬. ದ್ರುವನಾರಾಯಣ (ಅನು ಕೊಟ್ರಯ್ಯ ಸಿ.ಟಿ.ಎಂ. ಮೂಲ ವಿಜಯನಗರದ ಸಾಮ್ರಾಜ್ಯದ

ನೀರಾವರಿ ವ್ಯವಸ್ಥೆ

೭. ಹನುಮಂತಪ್ಪ ಟಿ. ಚಿತ್ರದುರ್ಗದ ಕಾಲದ ಐತಿಹಾಸಿಕ ಕೆರೆಗಳು ಮತ್ತು ಅವುಗಳ ನಿರ್ವಹಣೆ

ಎಂ.ಫಿಲ್ ಕಿರು ಪ್ರಬಂಧ ೨೦೧೧ ಪುಟ–೪೧.

೮. ಪೂರ್ವೋಕ್ತ ಪುಟ. ೩೪.

೯. ರಾಜಾರಾಮ್ ಹೆಗಡೆ, ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ೨೦೦೨. ಪುಟ-7.

೧೦. ಪೂರ್ವೋಕ್ತ, ಪು.೯೦.

೧೧. ಪುಟ ಅದೇ

೧೨. ಪುಟ ಅದೇ

೧೩. ಡಾ. ವಾಸುದೇವ ಬಡಿಗೇರ (ಹಾನಗಲ್ಲು) ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲಿಕ

ಪು. ೮೨.

೧೪. ಎಂ.ಎಂ. ಕಲಬುರ್ಗಿ. ಧಾರವಾಡ ಜಿಲ್ಲಾ ಶಾಸನ ಸೂಚಿ. ೧೯೭೫. ಕ.ವಿ.ವಿ. ಧಾರವಾಡ. ಪುಟ ಸಂ. ೫೯.

೧೫. ಪೂರ್ವೋಕ್ತ, ಪುಟ ೬೦.

೧೬. ಪೂರ್ವೋಕ್ತ, ಪುಟ ೬೧.

೧೭. ಪೂರ್ವೋಕ್ತ, ಪುಟ ೬೨.

೧೮. ಪೂರ್ವೋಕ್ತ, ಪುಟ ೬೪.

೧೯. ಪೂರ್ವೋಕ್ತ, ಪುಟ ೬೫.

೨೦. ಪೂರ್ವೋಕ್ತ, ಪುಟ ೬೫.

೨೧. ಪೂರ್ವೋಕ್ತ, ಪುಟ ೬೬.

೨೨. ಪೂರ್ವೋಕ್ತ, ಪುಟ ೬೭.

೨೩. ಪೂರ್ವೋಕ್ತ, ಪುಟ ೬೮.

## ಅಧ್ಯಾಯ – ೪

## ಬಾವಿಗಳ ನಿರ್ಮಾಣ

ನಾಡಿನ ಭೌಗೋಳಿಕ ರಚನೆಯನ್ನು ಅಲ್ಲಿ ವಾಸಿಸುವ ಜನರ ಕೃಷಿಯ ಮೇಲೆ ಅಥವಾ ವ್ಯವಸಾಯದ ಮೇಲೆ ಅವಲಂಬಿಸಿ ಬೇಕಾದಂತ ಪರಿಸ್ಥಿತಿಯನ್ನು ನಿರ್ಮಾಣಮಾಡಿದೆ. ಈ ಕಾರಣದಿಂದ ರಾಜ್ಯದಲ್ಲಿ ಶೇಕಡಾ ೭೧% ಜನಸಂಖ್ಯೆ ಕೃಷಿಯಿಂದಲೇ ಬದುಕುತಿದ್ದಾರೆ.[೧] ಈ ಕೃಷಿಗೆ ಅವಶ್ಯಕವಾಗಿ ಮುಂಗಾರು ಮಳೆಗಳೇ ಮುಖ್ಯ ಆಧಾರವಾಗಿವೆ. ನೈರುತ್ಯ ಮಾನಸೂನದಿಂದ ಭೂಮಿಗೆ ಸುರಿಯುವ ಮುಂಗಾರು ಮಳೆಯನ್ನು ರೈತರು ಅವಲಂಬಿಸಿದ್ದಾರೆ. ಅದು ಬಾರದೇ ಇದ್ದಾಗ ಕೃತಕ ನೀರಾವರಿ ಮೇಲೆ ಅವಲಂಬಿಸಬೇಕಾಗುತ್ತದೆ. ಮಳೆ ಬಾರದಿದ್ದಾಗ ಆ ನೀರನ್ನು ಸಂಗ್ರಹ ಮಾಡಿಕೊಂಡು ತನ್ನ ಅವಶ್ಯಕತೆ ಪೂರೈಸಿಕೊಳ್ಳುತ್ತಿದ್ದರು.[೨] ಇಂತಹ ಸಂದರ್ಭಗಳು ಬಹು ಪುರಾತನ ಕಾಲದಿಂದಲೂ ಜನರು ಜಾಣ್ಮೆಯಿಂದ ಬಳಸಿಕೊಂಡು ತಮ್ಮ ಜೀವನವನ್ನು ಅಭಿವೃದ್ಧಿ ಪಡಿಸಿಕೊಳ್ಳುತ್ತಿದ್ದರು. ಕಾಲ ಕ್ರಮೇಣ ಜನರಿಗೆ ನೀರು ಪೂರೈಯಸಲು ಮತ್ತು ನೀರಾವರಿ ವ್ಯವಸ್ಥೆಯಿಂದ ಕೃಷಿ ಅಭಿವೃದ್ಧಿ ಪಡಿಸಲು ಕೆರೆ, ಕಾಲುವೆ, ಬಾವಿಗಳನ್ನು ಕಟ್ಟಿಸುವ ಪದ್ಧತಿ ನಾಡಿನಲ್ಲಿ ಬೆಳೆದುಕೊಂಡು ಬಂದಿದೆ.

ಕರ್ನಾಟಕವನ್ನು ಆಳಿದ ಅರಸರು, ಅಧಿಕಾರಿಗಳು, ಶ್ರೀಮಂತ ವರ್ಗದ ಜನರು ನಾಡಿನ ಪ್ರಜೆಗಳಿಗಾಗಿ ಕೆರೆ ಮತ್ತು ಬಾವಿಗಳನ್ನು ಕಟ್ಟಿಸುತ್ತಿದ್ದ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತವೆ. ಪ್ರವಾಸಿಗರ ಅನುಕೂಲಕ್ಕಾಗಿ ಬಾವಿಗಳನ್ನು ಕಟ್ಟಿಸುತ್ತಿದ್ದ ಉದಾಹರಣೆಗಳು. ಇತಿಹಾಸದಲ್ಲಿ ಮೌರ್ಯ ಅರಸ ಅಶೋಕನ ಕಾಲದಿಂದಲು ತಿಳಿಯಲು ಸಾಧ್ಯವಿದೆ. ಬಾವಿಯ ನೀರನ್ನು ಪ್ರಾಣಿ ಪಕ್ಷಿಗಳು ಮನುಷ್ಯರ ಅನುಕೂಲಕ್ಕಾಗಿ ಕಟ್ಟಿಸುತ್ತಿದ್ದರು. ಈ ಪರಂಪರೆ ಹಾವೇರಿ ಜಿಲ್ಲೆಯ ಹಾನಗಲ್ಲ ಪರಿಸರದಲ್ಲೂ ಬೆಳೆದುಕೊಂಡು ಬಂದಿದ್ದು ಅಲ್ಲಿನ ಶಾಸನಗಳನ್ನು ಆಧಾರವಾಗಿ ಇಟ್ಟುಕೊಂಡು ಕ್ಷೇತ್ರಕಾರ್ಯ ಕೈಗೊಂಡ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗಿನ ಬಾವಿಗಳ ಕುರಿತು ಪ್ರೌಢ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ಜನರಿಗೆ ಪ್ರಾಣಿಗಳಿಗೆ ಮತ್ತು ವ್ಯವಸಾಯಕ್ಕೆ ನೀರಿನ ವ್ಯವಸ್ಥೆ ಒದಗಿಸುವುದು. ಅಂದಿನ ಸಾಮಾಜಿಕ ಜವಾಬ್ದಾರಿ ಆಗಿತ್ತು ಎಂದು ವಿಜಯನಗರದ ಅರಸರ ಕಾಲದ ಶಾಸನ ಒಂದರಿಂದ ತಿಳಿದು ಬರುತ್ತದೆ. ಹಂಪಿಯ ಗಣೇಶ ಗುಡಿಯ ಮುಂದಿರುವ ಅಗಸೆಯಲ್ಲಿರುವ ಪ್ರೌಢ ಪ್ರತಾಪ, ದೇವರಾಯನ ಮಂತ್ರಿಯಾದ ಲಕ್ಷ್ಮೀದರನ ಶಾಸನ ಕ್ರಿ.ಶ. ೧೪೧೧ ರ

ದೇವರಾಯನ ಮಂತ್ರಿಗಳಾದ ಮಾದರಸ ಮತ್ತು ಸಾಯಣ್ಣರೆಂಬ ಈ ಕೆಳಗಿನಂತೆ ಉಲ್ಲೇಖಿಸಲಾಗುತ್ತದೆ.

[೩೭ನೇ ಸಾಲು]

"ತೋಡಿದ ಬಾವಿಯುಲ್ಲ ಮರೆ ಕಟ್ಟಿದ ಪರ್ಗ್ಗೆರೆಯಿಲ್ಲ
ಲೀಲೆಯಂ ಮಾಡಿದ ದೇವಾತಾಭವನಮಿಲ್ಲೋಲವಿಂ
ಬಿಡದಗ್ರಹಾರಮಿಲ್ಲಾಡಲದೇನೂ ಭೂಭವನ ಭುಂಭೂಕಮಾದುದು
ಕೀರ್ತಿ ಬಾಪು ನಾ ಪಾಡಿಯೆ ಸೈಪು ಮಾದರಸ ಸಾಯಿಣರಂಬ ಮಹಾಪ್ರಧಾನರಾ" ॥[೩]

ಈ ಶಾಸನನೋಕ್ತಿಯಂತೆ ಹುಟ್ಟಿದ ಮಗು ಬೆಳೆದು ದೊಡ್ಡವನಾದ ಮೇಲೆ ಜನ ಹಿತ ಕಾರ್ಯಗಳನ್ನು ಮಾಡಲೆಂದು ತಾಯಿ. ಆಶಿಸಿದ ತಾಯಿ ತನ್ನ ಮಗುವಿಗೆ ಉಪದೇಶಗಳು ನೀಡುತ್ತಿದ್ದ ಬಗ್ಗೆ ಜನಪದ ಸಾಹಿತ್ಯದಲ್ಲಿ ಕಂಡುಬರುತ್ತದೆ. ಆದೆ ರೀತಿಯಾಗಿ ಶಾಸನದಲ್ಲಿ ಕಂಡುಬರುತ್ತದೆ. ಇದಕ್ಕೆ ಉದಾಹರಣೆ ಲಕ್ಷ್ಮೀದರನ ತಾಯಿ ತನ್ನ ಮಗನಿಗೆ ಹಾಲು ಎರೆಯುತ್ತಾ ಹಾಡಿದ ಪದ್ಯವು ಈ ಕೆಳಗಿನಂತಿದೆ.

(೪೪ನೇ ಸಾಲು)

"ಕೆರೆಯಂ ಕಟಿಸು ಭಾವಿಯಂ ಸವೆಸು ದೇವಾಗಾರಮಂ ಮಾಡಿಸ
ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದ
ರ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯನ್ನುತ್ತಿಯೆಂತೆಲ್ಲವಂ ಪಿಂದೆ ತಾ.
ಯೆರೆದಳ್ವಾಲೆರೆವಂದು ತೊಟ್ಟು ಕಿವಿಯೊಳ್ಂ ಲಕ್ಷ್ಮೀಧರಾಮಾತ್ಯನಾ"[೪]

ಈಗಲೂ ಸೂಕ್ತ ಆರ್ಥಿಕ ಅಭಿವೃದ್ಧಿಯನ್ನು ಸುಧಾರಿಸುವುದು ಜನರಿಗೆ ಅವಶ್ಯಕವಾದ ನೀರನ್ನು ಒದಗಿಸುವುದು. ಜಲದಾನ ಪ್ರಮುಖವಾಗಿದ್ದರಿಂದ ಆಳಅರಸರು ಮತ್ತು ಜನರು ದೇವಸ್ಥಾನಗಳು ಕೆರೆ ಬಾವಿಗಳು ಕಟ್ಟಿಸುವುದರಿಂದ ಪುಣ್ಯ ಬರುವುದೆಂದು ನಂಬಿಕೆ ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಅದು ಹಾನಗಲ್ಲ ಪರಿಸರದಲ್ಲಿ ಬೆಳೆದುಬಂದಿದೆ.

**ರಚನೆ :**

'ಒಂದು ಕೊಳ ಹತ್ತು ಬಾವಿಗಳಿಗೆ ಸಮ
ಒಂದು ಕೆರೆ ಹತ್ತು ಕೊಳಗಳಿಗೆ ಸಮ
ಒಬ್ಬ ಮಗ ಹತ್ತು ಕೆರೆಗಳಿಗೆ ಸಮ
ಒಂದು ಮರ ಹತ್ತು ಮಕ್ಕಳಿಗೆ ಸಮ'[೫]

ಬಾವಿಗಳ ರಚನೆಯ ಬಗೆಗೆ ಪುರಾತನ ಗ್ರಂಥಗಳಾದ ವೇದಗಳು, ರಾಮಾಯಣ, ಮಹಾಭಾರತ ಇತ್ಯಾದಿಗಳಲ್ಲಿ ಉಲ್ಲೇಖಗಳು ಕಂಡುಬರುತ್ತದೆ. ಇಂತಹ ಆಕರಗಳಲ್ಲಿ 'ಕಶ್ಯಪನ ಕೃಷಿ ಸೂಕ್ತಿ' ಒಂದು. ಇನ್ನೊಂದು ಪುರಾತನ ಕೃತಿ ಎಂದರೆ 'ವಿಶ್ವವಲ್ಲಭ ಮಿಶ್ರಚಕ್ರಪಾಣಿ'. ಇದರಲ್ಲಿ ಅನೇಕ ಬಾವಿಗಳ ನಿರ್ಮಾಣ ಮಾದರಿಗಳನ್ನು ನೀಡಲಾಗಿದೆ. ಸಾಮಾನ್ಯವಾಗಿ ಸ್ಥಳದ ಭೌಗೋಳಿಕ ಪರಿಸ್ಥಿತಿಯನ್ನು ಆಧರಿಸಿಯೇ ಈ ರಚನೆಗಳನ್ನು ಕೈಗೊಳ್ಳಲಾಗುತ್ತಿತ್ತು.[೬]

ಬಾವಿ ತೋಡಲು ಪ್ರಮುಖವಾದ ಅಂಶಗಳನ್ನು ಚಾವುಂಡರಾಯನ "ಉದಕಾರ್ಗಳದ" ಐದನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಅದು ಹುಟ್ಟುವ ಸ್ಥಳಗಳ ಪ್ರಾಕೃತಿಕ ಲಕ್ಷಣಗಳನ್ನು, ಭೂರಚನೆ, ಮಣ್ಣಿನ ಗುಣ, ಜಲ ಹುಟ್ಟಲು ಅಗೆಯಬೇಕಾದ ಆಳ ಇತ್ಯಾದಿಗಳ ವಿವರ ನೀಡಿದ್ದಾನೆ. ಗ್ರಾಮಗಳಿಗೆ ಆಗ್ನೇಯ ಮತ್ತು ವಾಯುವ್ಯ ದಿಕ್ಕುಗಳನ್ನು ಬಿಟ್ಟು ಉಳಿದ ದಿಕ್ಕುಗಳನ್ನು ಅಂದರೆ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಮತ್ತು ಈಶಾನ್ಯ ದಿಕ್ಕುಗಳಲ್ಲಿ ಬಾವಿ–ಕೆರೆಗಳನ್ನು ನಿರ್ಮಿಸಬೇಕು.[೭]

**ಬಾವಿಗಳ ನಿರ್ಮಾಣದ ಉದ್ದೇಶ :**

ಹಾನಗಲ್ಲ ಪರಿಸರದಲ್ಲಿ ಧಾರ್ಮಿಕ ಉದ್ದೇಶ ಹಾಗೂ ಇತರ ಉದ್ದೇಶಗಳಿಗಾಗಿ ಬಾವಿಗಳನ್ನು ನಿರ್ಮಾಣ ಮಾಡಿದ್ದಾರೆ. ಆ ಬಾವಿಗಳು ಪ್ರಾಚೀನ ಕಾಲದಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ ಎಂಬುದು ಇವುಗಳ ನಿರ್ಮಾಣದ ಉದ್ದೇಶದಿಂದ ತಿಳಿಯಬಹುದಾಗಿದೆ. ಅವುಗಳ ಕಾರ್ಯಗಳು ಈ ಕೆಳಗಿನಂತಿವೆ.

೧. ಉದ್ಯಾನವನಗಳು ಮತ್ತು ತೋಟಗಳು
೨. ಕುಡಿಯುವ ನೀರು
೩. ವಿಹಾರಾರ್ಥ
೪. ಧಾರ್ಮಿಕ ಉದ್ದೇಶ
೫. ಸಾಮಾಜಿಕ ಮತ್ತು ಇತರೆ

**೧. ಉದ್ಯಾನವನಗಳು ಮತ್ತು ತೋಟಗಳು :**

ಹಾನಗಲ್ಲ ಪರಿಸರದಲ್ಲಿ ಬಾವಿಗಳ ಸುತ್ತಲೂ ಉದ್ಯಾನವನ ಮತ್ತು ತೋಟಗಳನ್ನು ಬೆಳೆಸಿರುವುದು ಮುಖ್ಯವಾಗಿ ಕಾಣಬಹುದು. ಈ ಉದ್ಯಾನವನಗಳ ಬೆಳವಣಿಗೆಗೆ ನೀರಿನ ಅವಶ್ಯಕತೆ ಇರಬೇಕಾಗುತ್ತದೆ. ಈ ಕಾರಣದಿಂದ ಬಾವಿಗಳ ನೀರನ್ನು ಉಪಯೋಗಿಸಿಕೊಂಡು ಉದ್ಯಾನವನಗಳಿಗೆ ನೀರನ್ನು ಕಾಲುವೆಗಳ ಮುಖಾಂತರ ಹರಿಸಲಾಗುತ್ತಿತ್ತು.ಈ ಎಲ್ಲಾ

ಅಂಶಗಳಿಂದ ತಿಳಿದುಬರುವುದೇನೆಂದರೆ ಅಂದಿನ ಕಾಲದ ದೇವಾಲಯಗಳು ನಗರಗಳು ಸುಂದರವಾಗಿ ಕಾಣುವಂತೆ ಮಾಡುವ ಉದ್ದೇಶವಾಗಿತ್ತು. ಇದು ನಗರಕ್ಕೆ ಬರುವ ಪ್ರವಾಸಿಗರು ಜನರು ವಿಶ್ರಾಂತಿ ತೆಗೆದುಕೊಳ್ಳುವ ಉದ್ದೇಶ ಬಹುಮುಖ್ಯವಾಗಿತ್ತು.

**೨. ಕುಡಿಯುವ ನೀರು:**

ಬಾವಿಗಳಿಂದ ಆಗುವಂತಹ ಬಹುಮುಖ್ಯವಾದ ಉಪಯೋಗವೆಂದರೆ ಪ್ರವಾಸಿಗರು, ವ್ಯಾಪಾರಿಗಳು ಹಾಗೂ ಸೈನಿಕರ ತಂಗುದಾಣವಾಗಿ ಬಾವಿಗಳಿರುವ ಪ್ರದೇಶವನ್ನು ಪ್ರಾಚೀನ ಕಾಲದಲ್ಲಿ ಉಪಯೋಗಿಸುತ್ತಿದ್ದುದು ಗಮನಿಸಬಹುದು. ೧೦ ನೇ ಶತಮಾನದಿಂದ ೧೮ನೇ ಶತಮಾನದವರೆಗೂ ಸಾರಿಗೆ ಸಂಪರ್ಕ ಸಾಧನಗಾಳಾಗಿ ಪ್ರಾಣಿಗಳು, ಗಾಡಿಗಳು ಮತ್ತು ರಥಗಳು ಬಳಕೆಯಲ್ಲಿ ಇದ್ದವು. ತ್ವರಿತವಾಗಿ ಮತ್ತು ವೇಗವಾಗಿ ಪ್ರಯಾಣ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಆದ ಕಾರಣ ಪ್ರವಾಸಿಗರು, ಜನರು, ರಾತ್ರಿಯ ವೇಳೆಯಲ್ಲಿ ಒಂದು ನಿರ್ದಿಷ್ಟವಾದ ಪ್ರದೇಶಗಳಲ್ಲಿ ರಾತ್ರಿಯನ್ನು ಕಳೆದು ನಂತರ ತಮ್ಮ ಪ್ರಯಾಣವನ್ನು ಮುಂದುವರಿಸುತ್ತಿದ್ದರು.

ಹಿಂದಿನ ಕಾಲದ ಸಮಾಜದಲ್ಲಿ ಜಾತ್ರೆಗಳನ್ನು ನಡೆಸುವುದು ರೂಢಿಯಲ್ಲಿತ್ತು. ಜಾತ್ರೆಗಳಿಗೆ ದೂರ ದೂರದ ಗ್ರಾಮಗಳ ಜನರು ಬರುತ್ತಿದ್ದುದರಿಂದ ಮತ್ತು ಸಾಮಾನ್ಯವಾಗಿ ಜಾತ್ರೆಗಳಲ್ಲಿ ಜನರು ಅಪಾರ ಸಂಖ್ಯೆಯಲ್ಲಿ ಸೇರುತ್ತಿದ್ದುದರು. ಮತ್ತು ಬನವಾಸಿ ೧೨೦೦೦ ದಲ್ಲಿ ಪ್ರಾಚೀನ ಹಾನಗಲ್ಲು ೫೦೦ ವ್ಯಾಪಾರ ವಿಭಾಗವಾಗಿತ್ತು. ಇದರಿಂದ ಹಾನಗಲ್ಲ ಪರಿಸರವು ವ್ಯಾಪಾರಿ ಪ್ರದೇಶವಾಗಿದ್ದರಿಂದ ಅಪಾರ ಪ್ರಮಾಣದ ಜನರು ಬರುವುದು ಸಾಮಾನ್ಯವಾಗಿತ್ತು. ಇಲ್ಲಿಗೆ ಬಂದತಹ ಜನರಿಗೆ ನೀರನ್ನು ಒದಗಿಸುವ ಕಾರ್ಯ ಬಾವಿಗಳದ್ದಾಗಿತ್ತು. ಉದಾಹರಣೆ ರಾಮಲಿಂಗೇಶ್ವರ ಜಾತ್ರೆ ತಿಳುವಳ್ಳಿ ಶಾಂತೇಶ್ವರ ಜಾತ್ರೆ ಹನಗಲ್ಲು ಗ್ರಾಮದೇವಿಯ ಜಾತ್ರೆ ಮತ್ತು ತಾರಕೇಶ್ವರ ಜಾತ್ರೆ ನಡೆಯುತ್ತಿದ್ದು, ಬೇರೆ ಬೇರೆ ಪ್ರದೇಶದ ಜನರು ಆಗಮಿಸಿವುದನ್ನು ಇಲ್ಲಿ ಕಾಣಬಹುದು.

**ಧಾರ್ಮಿಕ ಉದ್ದೇಶ :**

ಬಾವಿಗಳನ್ನು ನೀರಿನ ಸೌಕರ್ಯಕ್ಕಲ್ಲದೆಯೇ ಧಾರ್ಮಿಕ ಉದ್ದೇಶಗಳಿಗೂ ಬಳಸಿಕೊಳ್ಳಲಾಗಿದೆ. ಈ ಬಾವಿಗಳನ್ನು ಮುಖ್ಯವಾಗಿ ದೇವಾಲಯಗಳಿಗೆ ಹೊಂದಿಕೊಂಡಂತೆ ಇರುವುದರಿಂದಾಗಿ ಇವು ಧಾರ್ಮಿಕ ಕ್ಷೇತ್ರದಲ್ಲಿ ತಮ್ಮದೇ ಆದಂತಹ ಸ್ಥಾನಗಳನ್ನು

ಪಡೆದುಕೊಂಡಿವೆ. ಜೈನ ಸಾಹಿತ್ಯ ಮತ್ತು ಕೆಲವು ಶಾಸನಗಳ ಪ್ರಕಾರ ಇವುಗಳನ್ನು ದೇವಾಲಯಗಳ ಜೊತೆಯಲ್ಲಿಯೇ ಕಟ್ಟುತ್ತಿದ್ದರು. ಶಾಸ್ತ್ರೋಕ್ತವಾಗಿ ದೇವಾಲಯಗಳು ಇರುವಂತಹ ಪ್ರದೇಶದಲ್ಲಿ ನೀರಿನ ಸೌಕರ್ಯ ಇಲ್ಲದಿದ್ದರೆ ಅಂತಹ ಸ್ಥಳಗಳಲ್ಲಿ ದೇವರು ಇರುವುದಿಲ್ಲ ಎಂಬ ನಂಬಿಕೆ ಇದೆ. ಒಂದು ದೇವಾಲಯವನ್ನು ಕಟ್ಟಿದರೆ ಅದರ ಮುಂಭಾಗ ಅಥವಾ ಎಡಭಾಗದಲ್ಲಿ ಬಾವಿಯನ್ನು ಕಟ್ಟಲೇಬೇಕು ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ.[೪]

ಹಾನಗಲ್ಲು ಪ್ರದೇಶವನ್ನು ಆಳಿದ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ದೇವಾಲಯಗಳಿಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಈ ಎಲ್ಲ ದೇವಾಲಯಗಳಿಗೆ ಪ್ರಾಚೀನ ಕಾಲದಲ್ಲಿ ಬಾವಿಗಳು ಇದ್ದಿದ್ದು ಕಂಡುಬರುತ್ತದೆ. ಉದಾಹರಣೆಗೆ ಹಾನಗಲ್ಲು ತಾಕೇಶ್ವರ ದೇವಾಲಯ ಗುಡುಗುಡಿಯ ಮಹಿಷಿಮರ್ಧಿನಿಯ ದೇವಾಲಯ ಗೆಜ್ಜೆಹಳ್ಳಿಯ ಶಿವಾಲಯ, ಮಕರವಳ್ಳಿಯ ಶಿವಾಲಯ, ಬಾಳಂಬಿಡದ ಜೀನಾಲಯ, ಹೀರೂರಿನಸೂರ್ಯನಾರಾಯಣ ದೇವಾಲಯ ಮತ್ತು ಬಸವೇಶ್ವರ ದೇವಾಲಯ, ಸಮ್ಮಸಗಿಯ ರೇಣುಕಾದೇವಿಯ ದೇವಾಲಯಗಳ ಆವರಣದಲ್ಲಿ ಬಾವಿಗಳು ಕಂಡುಬರುತ್ತವೆ.

**ಹಾನಗಲ್ಲ ಪರಿಸರದ ಆಯ್ದ ಬಾವಿಗಳು :**

**ಕಲ್ಲಬಾವಿ :** ಈ ಬಾವಿಯು ಹನಗಲ್ಲ ನಗರದ ಮಧ್ಯಭಾಗದಲ್ಲಿರುವ ಪ್ರಾಚೀನ ಬಾವಿಯಾಗಿದೆ. ಇದು ೧೧-೧೨ ನೇ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣ ಗೊಂಡಿದೆ. ಈ ಬಾವಿಯ ಹತ್ತಿರ ಕಲ್ಯಾಣ ಚಾಲುಕ್ಯರ ಶೈಲಿಯ ಶಿವಲಿಂಗವಿದ್ದು ಇದು ಪೂಜೆ ಮತ್ತು ಇತರೆ ಕೆಲಸಗಳಿಗೆ ಮಹತ್ವರವಾದ ವಿಚಾರಗಳಿಗೆ ಉಪಯೋಗಕ್ಕೆ ಬರುತ್ತಿತ್ತು. ಈ ಬಾವಿಯು ಇಂದಿಗೂ ಸುಸ್ಥಿತಿಯಲ್ಲಿಯದ್ದು ಆಯುತಾಕಾರದಲ್ಲಿ ಬಾವಿಯ ನಿರ್ಮಾಣಕ್ಕೆ ಕಲ್ಲುಗಳನ್ನು ಬಳಸಿದ್ದು ಮೇಲೆ ನೋಟ ಸುಂದರವಾಗಿ ಕಂಡುಬರುತ್ತದೆ. ಈ ಬಾವಿಯ ಮತ್ತೊಂದು ವಿಶೇಷವೆನೆಂದರೆ, ಎಲ್ಲ ಕಾಲದಲ್ಲಿಯೂ ನೀರಿನಿಂದ ತುಂಬಿರುತ್ತದೆ. ಅದರಂತೆ ಹಾನಗಲ್ಲ ನಂಬಿಕೆಯ ಪ್ರತೀಕವಾಗಿ ಜನರು ಇಲ್ಲಿ ನಡೆದುಕೊಳ್ಳುತ್ತಾರೆ. ಈ ಬಾವಿಗೆ ಮೆಟ್ಟಲುಗಳಿದ್ದು ಇಂದಿನ ದಿನಗಳಲ್ಲಿ ಕೊಳಚೆ ಮಿಶ್ರಿತ ನೀರಾಗಿ ಕಂಡುಬರುತ್ತದೆ. ಈ ಬಾವಿಗೆ ಪ್ರತಿವರ್ಷ ನಾಗರ ಪಂಚಮಿಯಂದು ಜನರಿಗೆ ಆಕರ್ಷಣೆಯ ಕೇಂದ್ರ ಬಿಂದು. ಪ್ರತಿ ನಾಗರ ಪಂಚಮಿಗೆ ಊರಿನ ಹೆಂಗಸರೆಲ್ಲರು ಮತ್ತು ಮದುವೆಯಾದ ಮದುಮಕ್ಕಳು ಪೂಜೆಯನ್ನು ಸಲ್ಲಿಸಿ ಹರಕೆಯನ್ನು ಕಟ್ಟಿಕೊಂಡು ಇಷ್ಟ ಸಿದ್ಧಿಗೆ ಪ್ರಾರ್ಥಿಸುತ್ತಾರೆ.

ಕ್ಷೇತ್ರಕಾರ್ಯಕ್ಕೆಂದು ಹೋದಾಗ ಈ ಬಾವಿಯ ಮೇಲುಗಡೆ ನೀರು ಮಲಿನಗೊಂಡಿದೆ ಕುಡಿಯಲು ಯಾರೂ ಉಪಯೋಗಿಸಬಾರದು ಎಂಬ ನಾಮ ಫಲಕವನ್ನು ಹಾಕಿಸಿದ್ದಾರೆ. ಪುರಸಭೆಯವರು ಈ ಬಾವಿಯ ಮೇಲ್ಭಾಗದಲ್ಲಿ ಶಾಸ್ತ್ರಿ ಹೊಂಡವಿದ್ದು ಅದು ಸಂಪೂರ್ಣ ಹೂಳು ತುಂಬಿದೆ. ಅದನ್ನು ಸರಿಪಡಿಸಿ ಉದ್ಯಾನವನ ಮಾಡಿದರೆ ಹಾನಗಲ್ಲ ನಗರದಲ್ಲಿಯೇ ಸುಂದರವಾದ ಉದ್ಯಾನವನವಾಗುತ್ತದೆ.

**ಕುರುಬ ಬಾವಿ :** ಇದು ಹಾನಗಲ್ಲ ಪರಿಸರದ ಮತ್ತೊಂದು ಪ್ರಾಚೀನ ಬಾವಿ. ಇದು ನಗರದಿಂದ ಮಂತಾಗಿ ಹೋಗುವ ಮಾರ್ಗ ಮಧ್ಯ ಸಿಗುತ್ತದೆ. ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಬಾವಿಯಾಗಿದ್ದು ಹಾನಗಲ್ಲ ಪರಿಸರದಲ್ಲಿಯೇ ಅತೀ ದೊಡ್ಡ ಬಾವಿಯಾಗಿದೆ. ಈ ಬಾವಿಯು ಸಂಪೂರ್ಣ ಕಲ್ಲಿನಿಂದ ಕೂಡಿದೆ ಹೊರಗಡೆಯಿಂದ ಇದರ ವಿಕ್ಷಣೆಯು ಕಲ್ಯಾಣಿಯ ತರ ಕಾಣುತ್ತದೆ. ಇದರ ನೀರಿನ ಸಂಗ್ರಹಣ ಸಾಮರ್ಥ್ಯವು ೬ ಹೆಕ್ಟೇರ್ ನೀರಾವರಿ ಸಾಮರ್ಥ್ಯ ಹೊಂದಿದೆ ಎಂದು ಹೇಳಬಹುದು. ಅದರಂತೆ ಈ ಬಾವಿಯನ್ನು ಎಲ್ಲ ಜನಾಂಗದವರು ಉಪಯೋಗಿಸುತ್ತಿದ್ದು ಜನರಿಗೆ ಇದು ಇಂದಿಗೂ ಉಪಯೋಗಕಾರಿಯಾಗಿದೆ.

ಕುರು ಬಾವಿಯ ಇತಿಹಾಸವನ್ನು ತಿರಿಗಿಸಿ ನೋಡಿದಾಗ ಇದರ ಬಗ್ಗೆ ಅನೇಕ ರೀತಿಯ ಐತಿಹ್ಯಗಳು ಕಂಡುಬರುತ್ತದೆ. ಅವುಗಳೆಂದರೆ ಬಾವಿಯ ಕಟ್ಟೆಯ ಮೇಲೆ ದ್ಯಾಮವ್ವನ ಗುಡಿ ಇದ್ದು ಈ ಗುಡಿಗೆ ಇಲ್ಲಿನ ಮಹಿಳೆಯರು ಮತ್ತು ಓಣಿಯ ಜನರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ೧೧ ನೇ ಶತಮಾನದಲ್ಲಿ ಈ ಬಾವಿಯು ಜನವಸತಿ ಪ್ರದೇಶದಲ್ಲಿ ಇದ್ದು ಸೈನಿಕರಿಗೆ ಮತ್ತು ನಾಗರಿಕರಿಗೆ ಬಹು ಉಪಯೋಗವಾದ ಬಾವಿಯಾಗಿದೆ ಎಂದು ಸ್ಥಳೀಯರು ನಂಬಿದ್ದಾರೆ. ಬಾವಿಯ ಆಳ ೧೨೦ ಅಡಿಯಾಗಿದ್ದು ೧೦೧ ಜಲವನ್ನು ಹೊಂದಿದೆ ಮತ್ತು ೧೨ ಗಡಗಡೆಯನ್ನು ಹೊಂದಿದೆ. ಬಾವಿಯನ್ನು ಇತ್ತೀಚಿನ ದಿನಗಳಲ್ಲಿ ಪುರಸಭೆಯು ಸುಪರ್ದಿಗೆ ವಹಿಸಿಕೊಂಡಿದ್ದು ಈ ಬಾವಿಯ ಪರಿಸರದ ಸುತ್ತ ಉದ್ಯಾನವನವನ್ನು ನಿರ್ಮಿಸಿದೆ. ಈ ಬಾವಿಯು ಉದ್ಯಾನವನವನ್ನು ಇಲ್ಲಿಯ ಜನರಿಗೆ ವಾಯುವಿಹಾರಕ್ಕೆ ತುಂಬಾ ಅನುಕೂಲವಾಗಿದ್ದು ಅದರ ಸಂಪೂರ್ಣ ಮೇಲಿನ ಭಾಗವನ್ನು ಕಬ್ಬಿಣದ ಜಾಲಾಂದ್ರದಿಂದ ಮುಚ್ಚಲಾಗಿದೆ.

**ಬಸವನ ಬಾವಿ :** ಇದು ಹಾನಗಲ್ಲ ಪರಿಸರದ ಗುಡಗುಡಿ ಗ್ರಾಮದಲ್ಲಿ ಶಿವಾಲಯದ ಮುಂಭಾಗದಲ್ಲಿ ಕಂಡುಬರುತ್ತದೆ. ಈ ಬಾವಿಯ ಹತ್ತಿರ ಬಸವನ ಮೂರ್ತಿಯಿದ್ದು ಇದರಿಂದ

ಬಸವನ ಬಾವಿ ಎಂದು ಹೆಸರು ಬಂದಿರಬೇಕು. ಈ ಊರಿನ ಇನ್ನೊಂದು ಮೂಲೆಯಲ್ಲಿ ಪಾರ್ವತಿಯ ದೇವಸ್ಥಾನವಿದ್ದು ಇದು ಕೂಡಾ ಬಾದಾಮಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದ್ದು, ಅದರಂತೆ ಈ ಬಾವಿಯು ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬೇಕು. ಬಸವೇಶ್ವರ ಬಾವಿಯು ಕಾಲ ಕಾಲಕ್ಕೆ ದುರುಸ್ತಿಗೊಂಡಿದ್ದು, ಇಂದಿಗೂ ಸುಸ್ಥಿತಿಯಲ್ಲಿ ಇದೆ. ಈ ಬಾವಿಯು ವೃತ್ತಾಕಾರವಾಗಿದ್ದು ೮೦ ಅಡಿ ಆಳವಾಗಿದೆ. ಹಿಂದಿನ ದಿನಗಳಲ್ಲಿ ಈ ಬಾವಿಯು ಇಲ್ಲಿನ ಶಿವಾಲಯದ ಪೂಜೆಗೆ ಮೀಸಲಾಗಿ ಇದ್ದಿರಬೇಕು. ತದನಂತರ ಇದಕ್ಕೆ ಜನರು ದಿನನಿತ್ಯ ಕುಡಿಯುವ ನೀರಿನ ಬಳಕೆಗೂ ಉಪಯೋಗ ಮಾಡಿರುತ್ತಾರೆ. ಕ್ಷೇತ್ರ ಕಾರ್ಯದಲ್ಲಿ ಗಮನಿಸಿದಂತೆ ಈ ಬಾವಿಯು ಯಾವಾಗಲೂ ನೀರಿನಿಂದ ತುಂಬಿದ್ದು ಪ್ರತಿ ಕಾರು ಹುಣ್ಣಿಮೆಯಂದು ಮತ್ತು ನಾಗರ ಪಂಚಮಿಯಂದು ಜನರು ಇಲ್ಲಿನ ಅನುಗ್ರಹವಿದೆ ಎಂದು ನಂಬಿರುತ್ತಾರೆ.

ಬಾವಿಯು ಇಂದು ಗ್ರಾಮ ಪಂಚಾಯತಿಯವರ ಸುಪರ್ದಿಗೆ ವಹಿಸಿಕೊಟ್ಟಿದ್ದು ಬಾವಿಯ ನಿರ್ವಹಣೆಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಬಾವಿಯ ಮೇಲಗಡೆ ಇದ್ದ ನೀರು ಸೇದು ಗಡಗಡೆಯನ್ನು ಇದ್ದಿದ್ದು ತೆಗೆದುಹಾಕಲಾಗಿದೆ.

**ಅಂಬಿಗರ ಬಾವಿ :** ಹಾನಗಲ್ಲ ನಗರದಲ್ಲಿರುವ ಮತ್ತೊಂದು ಪ್ರಾಚೀನ ಬಾವಿ ಅಂಬಿಗರ ಬಾವಿ. ಇದು ವೃತ್ತಾಕಾರದ ಬಾವಿಯಗಿದ್ದು ೮೦ ಅಡಿ ಆಳವನ್ನು ಹೊಂದಿದೆ. ಈ ಬಾವಿಯ ಒಳ ರಚನೆ ಕಲ್ಲಿನಿಂದ ಆಗಿದ್ದು ೩ ಮೀಟರ ಒಳಗೋಡೆ ದ್ವೀಪವಿಡುವ ಸಣ್ಣ ಗೂಡನ್ನು ನಿರ್ಮಿಸಿದ್ದಾರೆ. ಈ ಬಾವಿಯು ಅಂಬಿಗರ ಸಮುದಾಯಕ್ಕೆ ಸೇರಿದ ಬಾವಿಯಾಗಿದ್ದು. ಇದನ್ನು ಅಂಬಿಗರು ನೀರನ್ನ ಕುಡಿಲು ಉಪಯೋಗಿಸುತ್ತಿದ್ದರು ಎಂದು ನಮಗೆ ತಿಳಿಯುತ್ತದೆ. ಈ ಬಾವಿಯು ಇಂದು ಸಂಪೂರ್ಣವಾಗಿ ನಶಿಸಿದ್ದು ಬಾವಿಯನ್ನು ಯಾವುದೇ ಕೆಲಸಗಳಿಗೆ ಉಪಯೋಗಿಸುತ್ತಿಲ್ಲ. ಈ ಬಾವಿಯ ಸುತ್ತಲು ಅಂಬಿಗರ ಮನೆಗಳು ಇದ್ದು ಕದಂಬರ ಕಾಲದಲ್ಲಿ ನಿರ್ಮಾಣವಾದ ಶಿವನ ದೇವಾಲಯವಿದೆ. ಈ ಬಾವಿಯು ಇಂದು ಮೇಲಗಡೆ ಕಬ್ಬಿಣದ ಜಾಲಂದ್ರದ ಮುಖಾಂತರ ಮುಚ್ಚಲಾಗಿದೆ.

**ಬಸವೇಶ್ವರ ಬಾವಿ :** ಇದು ಹಾನಗಲ್ಲ ಪರಿಸರ ಹಿರೂರು ಗ್ರಾಮದಲ್ಲಿ ಬಸವೇಶ್ವರ ದೇವಸ್ತಾನದ ಆವರಣದಲ್ಲಿ ಕಂಡುಬರುವ ವೃತ್ತಾಕಾರದ ಬಾವಿ. ಈ ಬಾವಿಯು ಹಾನಗಲ್ಲ ಪರಿಸರದಲ್ಲಿ ಮಹತ್ವವಾದ ಪಾತ್ರ ವಹಿಸಿದ್ದು ಸುತ್ತ ಮುತ್ತಲಿನ ಗ್ರಾಮಕ್ಕೆ ಈ ಬಾವಿಯು ಪೂಜನೀಯ ಭಾವನೆ ಹೊಂದಿದೆ. ಯಾಕೆಂದರೆ ಈ ಬಾವಿಯು ಗ್ರಾಮದ ಬಸವೇಶ್ವರ

ದೇವಸ್ಥಾನದ ಆವರಣದಲ್ಲಿದ್ದು ದೇವಸ್ಥಾನವು ಈ ಭಾಗದಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಈ ದೇವಸ್ಥಾನವು ದೊಡ್ಡವಾಗಿದ್ದು ವರ್ಷಕ್ಕೆ ಒಮ್ಮೆ ಊರಿನಲ್ಲಿ ಜಾತ್ರೆ ನಡೆಯುತ್ತದೆ. ಜಾತ್ರೆಯ ಸಂದರ್ಭದಲ್ಲಿ ಜನರು ಬಾವಿ ಸ್ನಾನ ಮಾಡಿ ದೇವರಿಗೆ ದೀಡ ದಂಡ ನಮಸ್ಕಾರವನ್ನು ಮಾಡಿದರೆ ಇಷ್ಟಾರ್ಥ ಸಿದ್ಧಿ ಆಗುತ್ತದೆ ಎಂದು ನಂಬಿಕೆಯಿದೇ ರೀತಿ ದೇವಸ್ಥಾನದಲ್ಲಿ ಪೂಜೆ ಪುನಸ್ಕಾರಗಳಿಗೆ ಈ ಬಾವಿಯ ನೀರನ್ನು ಉಪಯೋಗಿಸುತ್ತಾರೆ.[೧೦]

ಈ ಬಾವಿಯು ವೃತ್ತಾಕಾರದ ಬಾವಿಯಾಗಿದ್ದು ೬೦ ಅಡಿ ಉದ್ದವಾಗಿದೆ. ಈ ಬಾವಿಯು ರಚನೆಯು ಚೌಕಾಕಾರದ ಕಲ್ಲಿನಿಂದ ನಿರ್ಮಾಣವಾಗಿದ್ದು ೩ ಮೀಟರ್ ಎತ್ತರ ವಿದೆ. ಇದಕ್ಕೆ ಒಂದು ನೀರು ಸೇದುವ ಗಡಗಡೆ ಇದ್ದು ಬಾವಿಯ ಪಕ್ಕದಲ್ಲಿ ಒಂದು ವೀರಗಲ್ಲು ಇದ್ದು, ಆ ವೀರಗಲ್ಲಿನ ಮೇಲೆ ರೈತನ ನೇಗಿಲು ಇರುವ ಚಿತ್ರವಿದೆ. ಈ ಬಾವಿಯ ಇನ್ನೊಂದು ವಿಶೇಷವೆಂದರೆ ಈ ದೇವಾಲಯದ ಇನ್ನೊಂದು ದೇವರು ಸೂರ್ಯನಾರಾಯಣನಿಗೆ ಇದೇ ಬಾವಿಯ ನೀರಿನಿಂದ ಅಭಿಷೇಕ ಮಾಡಿದ ನಂತರವೆ ದರ್ಶನಕ್ಕೆ ಭಕ್ತರಿಗೆ ಅನುಮತಿ ನೀಡಲಾಗುತ್ತದೆ. ಈ ಬಾವಿಯು ಇಂದಿಗೂ ಸುಸ್ಥಿತಿಯಲ್ಲಿ ಇದ್ದು ಉಪಯೋಗಕ್ಕೆ ಬಳಸಲಾಗಿದೆ.

**ಕುಮಾರೇಶ್ವರ ಮಠದ ಬಾವಿ :** ಇದು ಹಾನಗಲ್ಲಿನ ವೀರಕ್ತಮಠದ ಆವರಣದಲ್ಲಿ ಇರುವ ಬಾವಿ. ಕಲ್ಲಿನ ಕುಮಾರೇಶ್ವರನ ಅನುಗ್ರಹವಾಗಿ ತೋಡಲಾಗಿರುವ ಬಾವಿ ಎಂದು ನಂಬಲಾಗಿದೆ. ಕಲ್ಲಿನ ಮಠದ ಭಕ್ತರಿಗೆ ಕುಡಿಯು ನೀರಿನ ಉಪಯೋಗಕ್ಕೆ ಮಾಡಲಾಗುತ್ತಿತ್ತು ಎಂದು ಹೇಳಲಾಗಿದೆ. ಅದರಂತೆ ಈ ಬಾವಿಯು ವೃತ್ತಾಕಾರದ ರಚನೆಯನ್ನು ಹೊಂದಿದ್ದು ೧೦೦ ಅಡಿ ಆಳವನ್ನು ಹೊಂದಿದೆ. ಮಠವು ಪ್ರಾಚೀನ ಇತಿಹಾಸವನ್ನು ಹೊಂದಿದ್ದು ಕುಮಾರೇಶ್ವರ ಸ್ವಾಮಿಗಳ ಮಠವು ರಾಜ್ಯದಲ್ಲಿ ಒಂದು ಮಹತ್ವವಾದ ಪಾತ್ರವನ್ನು ವಹಿಸಿದೆ. ಅದರಂತೆ ಈ ಬಾವಿಯ ನೀರನ್ನು ಮಠದ ಜಾತ್ರೆಯ ಸಂದರ್ಭದಲ್ಲಿ ಹಾಗೂ ಗದ್ದುಗೆಯ ಪೂಜೆಯಲ್ಲಿ ಉಪಯೋಗಿಸುತ್ತಿದ್ದರು ಎಂದು ತಿಳಿಯುತ್ತದೆ.

ಈ ಬಾವಿಯು ಇಂದಿಗೂ ಸುಸ್ಥಿತಿಯಲ್ಲಿ ಇದೆ. ಈ ಬಾವಿಯ ನಿರ್ವಹಣೆಯನ್ನು ಇಂದಿಗೂ ಮಠದ ಸುಪ ರ್ಧಿಗೆ ಇದ್ದು ಬಾವಿಯಲ್ಲಿ ನೀರನ್ನು ಯಂತ್ರದ ಮುಖಾಂತರ ಮೇಲೆತ್ತಿ ಪಕ್ಕದಲ್ಲಿರುವ ಮಾವಿನ ತೋಟಕ್ಕೆ ನೀರನ್ನು ಉಣಿಸುತ್ತಿದೆ. ಇದರಿಂದ ಮಠದ ಓಂಭಾಗದಲ್ಲಿ ಉದ್ಯಾನವನ ನಿರ್ಮಿಸಲಾಗಿದೆ. ಶ್ರೀಮಠದ ಆವರಣಕ್ಕೆ ಸುಂದರವಾದ ಕಳೆಯನ್ನು ತಂದುಕೊಟ್ಟಿದೆ.

**ಪಾಂಡವರ ಬಾವಿ :** ಇದು ದಶರಥ ಕೊಪ್ಪದ ಗ್ರಾಮದಲ್ಲಿ ಇದ್ದು, ಕಲ್ಮೇಶ್ವರ ದೇವಸ್ಥಾನ ಆವರಣದಲ್ಲಿ ಇದೆ. ಈ ಬಾವಿಯು ಸಂಪೂರ್ಣವಾಗಿ ಮುಚ್ಚಿದ್ದು, ತಾಳಿಕೆರೆಯ ನೀರಿನ ಹೆಚ್ಚಾದ ಸಂದರ್ಭದಲ್ಲಿ ಬಾವಿಯ ನೀರು ದೇವಸ್ಥಾನ ಆವರಣದಲ್ಲಿ ಉಕ್ಕುತ್ತದೆ. ಈ ಬಾವಿಯನ್ನು ಪಾಂಡವರು ವನವಾಸದಲ್ಲಿ ಇದ್ದಾಗ ಕುಡಿಯಲು ಉಪಯೋಗಿಸುತ್ತಿದ್ದರು ಎಂದು ನಂಬಲಾಗಿದೆ. ಆದರೆ, ಇಂದು ಬಾವಿಯು ಮುಚ್ಚಿದ್ದು ಅದರ ಅವಶೇಷಗಳು ಮಾತ್ರ ಕಂಡುಬರುತ್ತವೆ. ಜನರು ಇಲ್ಲಿ ಪಾಂಡವರು ನೆಲೆಸಿದ್ದರು ಎಂದು ಇಂದಿಗೂ ನಂಬಿದ್ದಾರೆ. ಇದು ಬರಿ ಊಹೆ ಮಾತ್ರ.

**ದತ್ತಾತ್ರೇಯ ಬಾವಿ :** ಈ ಬಾವಿಯು ತಾರಕೇಶ್ವರ ದೇವಸ್ಥಾನದ ಬಲಭಾಗದಲ್ಲಿದ್ದು ಬ್ರಾಹ್ಮಣರ ಕೇರಿಯಲ್ಲಿ ಕಂಡುಬರುತ್ತದೆ. ಈ ಬಾವಿಯ ನೀರನ್ನು ದೇವಸ್ಥಾನದ ಅಭಿಷೇಕಕ್ಕೆ ಮಾತ್ರ ಬಳಸಲಾಗುತ್ತಿತ್ತೆಂದು ನಮಗೆ ತಿಳಿದುಬರುತ್ತದೆ. ಅದೇ ರೀತಿಯಾಗಿ ಈ ಒಂದು ಕೇರಿಯಲ್ಲಿ ಸುಮಾರು ೧೫ ಬಾವಿಗಳಿವೆ (ದೇವಸ್ಥಾನಕ್ಕೆ ಸಂಬಂಧಿಸಿದ) ಎಂದು ನಮಗೆ ಕಂಡುಬರುತ್ತವೆ.

**ಕಂಚಗಾರ ಬಾವಿ :**

ಈ ಬಾವಿಯು ಹಾನಗಲ್ಲು ನಗರದ ಮಧ್ಯಭಾಗದಲ್ಲಿ ಕಂಚಗಾರ ಮಸೀದಿಯ ಹತ್ತಿರವಿದೆ. ಈ ಬಾವಿ ನೋಡಲು ಸುಂದರವಾಗಿದ್ದು ೫೦ಥ೫೦ ರ ಅಳತೆಯನ್ನು ಹೊಂದಿದ್ದು, ಸುತ್ತಲೂ ಗ್ರ್ಯಾನಟ್ ಕಲ್ಲುಗಳಿಂದ ಕಟ್ಟಲಾಗಿದೆ. ಇಲ್ಲಿ ನಾಲ್ಕು ಬದಿಯ ಗೋಡೆಗಳಲ್ಲಿ ಒಂದೊಂದು ಕಮಾನುಗಳ ಗೂಡುಗಳಿವೆ. ಈ ಬಾವಿಯು ಧಾರ್ಮಿಕ ಉಪಯೋಗಕ್ಕೆ ಬಳಕೆಯಗುತ್ತಿದ್ದು ಇಲ್ಲಿಯ ಮುಸ್ಲಿಂ ಸಮುದಾಯವು ಬಾವಿಯ ನೀರನ್ನು ಉಪಯೋಗಿಸುತ್ತಾರೆ. ಬಹುಶಃ ಇದು ಪ್ರಾಚೀನ ಬಾವಿಯಾಗಿದ್ದು, ೧೨ ತಿಂಗಳು ಬತ್ತದ ನೀರಾವರಿ ಮೂಲ ಹೊಂದಿದೆ.

**ಗುಡಗುಡಿ ಬಾವಿ:**

ಇದು ಹಾನಗಲ್ಲು ಪರಿಸರದಿಂದ ಉತ್ತರಕ್ಕೆ ೧೪ ಕಿ.ಮೀ. ದೂರದಲ್ಲಿದೆ. ಈ ಬಾವಿಯು ಪ್ರಾಚೀನ ಬಾವಿಯಾಗಿದ್ದು ಮಹಿಷಿಮರ್ಧಿನಿ ಗುಡಿಯ ಆವರಣದಲ್ಲಿದೆ. ಬಾವಿಯು ವೃತ್ತಾಕಾರವಾಗಿದ್ದು, ಒರಟು ಕಲ್ಲಿನಿಂದ ನಿರ್ಮಾಣಮಾಡಲಾಗಿದೆ. ಬಾವಿಯ ಆಳವು ೮೦ ಅಡಿ ಉದ್ದವಿದ್ದು, ಇಂದಿಗೂ ಸುಸ್ಥಿತಿಯಲ್ಲಿದೆ. ಬಾವಿಯ ಆವರಣವು

ವೃತ್ತಾಕಾರವಾಗಿದ್ದು ಆವಣದಲ್ಲಿ ವೀರಗಲ್ಲು ಇದೆ. ಈ ವೀರಗಳಲ್ಲು ಅಮೋಘವರ್ಷನ ಬಲ್ಲಾಳಗಾವುಂಡ ಮೊದಲಾದವರು ವೀರಮರಣ ಹೊಂದಿರುವ ಬಗ್ಗೆ ತಿಳಿಸುತ್ತದೆ. ಇಂದಿಗೂ ಇಲ್ಲಿಯ ಜನ ಈ ನೀರನ್ನು ತೀರ್ಥರೂಪದಲ್ಲಿ ಸೇವಿಸುತ್ತಾರೆ.

**ಕಂಟನ ಹೊಸಳ್ಳಿ ಬಾವಿ :**

ಇದು ಹಾನಗಲ್ಲು ಪರಿಸರದಿಂದ ೨ ಕಿ.ಮೀ. ದೂರದ ಇಮಾಮಸಾಬ ಎಂಬುವವರ ಹೊಲದಲ್ಲಿದೆ. ಈ ಬಾವಿಯು ವೃತ್ತಾಕಾರವಾಗಿದ್ದು, ಒರಟು ಕಲ್ಲಿನಿಂದ ಕೂಡಿದೆ. ಈ ಬಾವಿಯು ಸುಮಾರು ೧೦೦ ಅಡಿ ಉದ್ದವಿದ್ದು, ಈಗ ಅಂತರ್ಜಲವಿಲ್ಲದೆ ಒಣಗಿದೆ. ಕೆರೆಯ ಗೊಡೆಯ ಮೇಲೆ ಬ್ರಿಟೀಷರು ಈ ಬಾವಿಯ ನೀರು ಎಲ್ಲಾ ಜನಾಂಗದವರಿಗೂ ಕುಡಿಯಲು ಬಳಸಬೇಕೆಂಬ ಆಜ್ಞೆಯನ್ನು ಹೊರಿಸಿದ್ದಾರೆ. ಇಮಾಮಸಾಬ ಅವರು ಹೇಳುವ ಪ್ರಕಾರ ಮೊದಲು ಬಾವಿಯ ಕಟ್ಟೆಯ ಹತ್ತಿರ ಒಂದು ವೀರಗಲ್ಲು ಇದ್ದು, ಅದನ್ನು ವಿರಕ್ತಮಠದ ಆವರಣದಲ್ಲಿ ಇಡಲಾಗಿದೆ. ಈ ಬಾವಿಯ ಮೇಲ್ಭಾಗವನ್ನು ಕಬ್ಬಿಣದ ಜಾಲಾಂದ್ರದಿಂದ ಮುಚ್ಚಿಸಿದ್ದಾರೆ.

**ಗಾಜಿಪುರ ಬಾವಿ :**

ಇದು ಹಾನಗಲ್ಲು ಪರಿಸರದಿಂದ ಉತ್ತರಕ್ಕೆ ೪ ಕಿ.ಮೀ.ದೂರದಲ್ಲಿದೆ. ಈ ಬಾವಿಯ ಹತ್ತಿರ ೧೧ನೇ ಶತಮಾನದ ಕಲ್ಯಾಣ ಚಾಲುಕ್ಯರ ದೇವಾಲಯವಿದೆ. ಈ ಬಾವಿಯು ಇಂದಿಗೂ ಸುಸ್ಥಿತಿಯಲ್ಲಿದ್ದು, ವೃತ್ತಾಕಾರದ ಬಾವಿಯಾಗಿದೆ. ಈ ಬಾವಿಯ ಆಳ ಸುಮಾರು ೧೨೦ ಅಡಿ ಇದ್ದು, ಪಕ್ಕದ ದೊಡ್ಡ ಕೆರೆಯ ನೀರಾವರಿ ಮೂಲವನ್ನು ಹೊಂದಿದೆ. ಈ ಬಾವಿಯ ಸುತ್ತಮುತ್ತ ಇರುವ ಹೊಲಗಳ ಜನರು ಕುಡಿಯುವ ನೀರಿನ ಉಪಯೋಗಿಸುತ್ತಿದ್ದರೆಂದು ಹೇಳುತ್ತಾರೆ. ಈಗ ಬಾವಿಗೆ ನೀರಾವರಿ ಕೊಳವೆ ಮುಖಾಂತರ ನೀರನ್ನು ಎತ್ತಿ ಪಕ್ಕದ ಹೊಲಗಳಿಗೆ ವ್ಯವಸಾಯವನ್ನು ಮಾಡುತ್ತಿದ್ದಾರೆ.

**ಮಲ್ಲಿಗಾರ ಬಾವಿ :**

ಹಾನಗಲ್ಲು ಪರಿಸರದಿಂದ ಉತ್ತರಕ್ಕೆ ೧ ಕಿ.ಮಿ.ದೂರದಲ್ಲಿದೆ. ಈ ಬಾವಿಯು ವಿರೇಶ ಕಪ್ಪಣ್ಣವರ ಎಂಬುವವರ ಹೊಲದಲ್ಲಿದ್ದು ವೃತ್ತಾಕಾರದ ಬಾವಿಯಾಗಿದೆ. ಇವರ ಹೊಲದ ಪಕ್ಕದಲ್ಲಿ ರಾಷ್ಟ್ರಕೂಟದ ಕಾಲದ ಶಿವಲಿಂಗವಿದ್ದು, ಮೊದಲು ಈ ಬಾವಿಯ ಉಪಯೋಗ

ಇತ್ತೆಂದು ತಿಳಿಯಬಹುದು. ಈಗ ಇಂದಿನ ಪರಿಸ್ಥಿತಿಯಲ್ಲಿ ಬಾವಿಯ ನೀರನ್ನು ಮೇಲೆತ್ತಿ ತರಕಾರಿ ಬೆಳೆಯಲು ಉಪಯೋಗಿಸಲಾಗುತ್ತಿದೆ.

**ಅರಳೇಶ್ವರ ಬಾವಿ :**

ಹಾನಗಲ್ಲು ಪರಿಸರದಿಂದ ಸುಮಾರು ೧೪ ಕಿ.ಮೀ.ದೂರದಲ್ಲಿದೆ. ಈ ಬಾವಿಯು ವೃತ್ತಾಕಾರದ ಬಾವಿಯಾಗಿದ್ದು ಕಲ್ಲಿನ ಆವರಣ ಹೊಂದಿದೆ ಬಾವಿ ಆಳವು ೧೦೦ ಅಡಿ ಉದ್ದವಿದ್ದು, ಹತ್ತಿರ ಕೆರೆಯ ಜಲವನ್ನು ಹೊಂದಿದೆ. ಕೆರೆಯ ನೀರು ಬತ್ತಿದಾಗ ಈ ಬಾವಿಯ ನೀರನ್ನು ಜನರು ಕುಡಿಯಲು ಬಳಸುತ್ತಿದ್ದರೆಂದು ತಿಳಿದುಬರುತ್ತದೆ. ಆದರೆ ಇಂದು ಊರಿನಲ್ಲಿ ಶುದ್ಧ ನೀರಿನ ಘಟಕ ಆರಂಭವಾಗಿದ್ದು, ಬಾವಿಯ ಉಪಯೋಗವನ್ನು ನಿಲ್ಲಿಸಲಾಗಿದೆ.

**ಅಡಿಟಿಪ್ಪಣಿಗಳು:**

೧. ಕರ್ನಾಟಕ ನೀರಾವರಿ (ಟಿ. ಗೋವಿಂದ) ಪುಟ–೨೪.

೨. ವಿನೋದಾ ಪಾಟೀಲ ೨೦೦೦ ಕರ್ನಾಟಕದ ಪ್ರಚೀನ ಬಾವಿಗಳು ಪುಟ– ೧–೨೧.

೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨೩ ಹಂಪಿಯ ಶಾಸನಗಳು ಪುಟ– ೫೯.

೪. ಪೂರ್ವೋಕ್ತ ಪುಟ– ೬೦.

೫. ಸಿ.ಎಸ್. ವಾಸುದೇವನ್ ಹಂಪಿ ಪರಿಸರದ ಕೆರೆಗಳು, ಪುಟ–೧.

೬. ಶಂಕ್ರಪ್ಪ ಬಡಿಗೇರ ಗದಗ ಜಿಲ್ಲೆಯ ಕೆರೆ ಮತ್ತು ಬಾವಿಗಳ ಸಾಂಸ್ಕೃತಿಕ ಅಧ್ಯಯನ ಪುಟ–೨೧೦.

೭. ಪುಟ ಅದೇ

೮. ಕ್ಷೇತ್ರಕಾರ್ಯ ವರದಿ

೯. ಕ್ಷೇತ್ರಕಾರ್ಯ ವರದಿ

೧೦. ಕ್ಷೇತ್ರಕಾರ್ಯ ವರದಿ

## ಅಧ್ಯಾಯ-೫

### ಕೆರೆಗಳಿಗೆ ಸಂಬಂಧಿಸಿದ ನಂಬಿಕೆ ಮತ್ತು ಆಚರಣೆ :

ಕೆರೆಗಳನ್ನು ಕಟ್ಟುಸುವುದಕ್ಕೆ ಹಲವಾರು ಕಾರಣಗಳಿವೆ ಅದೊಂದು ಮಹತ್ವದ ಮತ್ತು ಪುಣ್ಯದ ಕಾರ್ಯ ಎಂಬ ನಂಬಿಕೆ ಪ್ರಾಚೀನ ಕಾಲದಿಂದ ಈ ಕಾಲದವರಿಗೂ ಕಾಣಬಹುದು. ನೀರು ಸಂಗ್ರಹಿಸಿ ಅದನ್ನು ತಮ್ಮ ಅವಶ್ಯಕತೆ ಅನುಗುಣವಾಗಿ ಉಪಯೋಗಿಸುವ ಉದ್ದೇಶದಿಂದ ಕೆರೆಗಳನ್ನು ನಿರ್ಮಿಸುತ್ತಿದ್ದರು. ಪ್ರಾಚೀನ ಕಥೆ ಮತ್ತು ಗ್ರಂಥಗಳಲ್ಲಿ ಕೆರೆಗಳನ್ನು ಕಟ್ಟಿಸುವುದರಿಂದ ಮೋಕ್ಷ ದೊರೆಯುವುದು ಎಂದು ಜನರಲ್ಲಿಯ ನಂಬಿಕೆಯು ಕೆರೆಗಳ ನಿರ್ಮಾಣಕ್ಕೆ ಮತ್ತೊಂದು ಪ್ರಮುಖ ಕಾರಣವಾಗಿದೆ.[೧] ಹೆಚ್ಚಾಗಿ ಕೃಷಿಗೆ ಹೆಚ್ಚು ಕೆರೆಗಳನ್ನು ನಿರ್ಮಾಣಗೊಂಡಿದ್ದನ್ನು ಕಾಣಬಹುದು. ಬಾದಾಮಿ ಚಾಲುಕ್ಯರು ಹಾನಗಲ್ಲ ಕದಂಬರು, ಕಲ್ಯಾಣದ ಚಾಲುಕ್ಯರು ಹಲವಾರು ಕೆರೆಗಳನ್ನು ಕಟ್ಟಿಸಿದ್ದಾರೆ. ಕೆರೆ-ಬಾವಿಗಳನ್ನು ಕಟ್ಟಿಸುವುದು ಒಡ್ಡುಗಳನ್ನು ಹಾಕುವುದು, ಪುಣ್ಯದ ಕಾರ್ಯ ಎಂಬ ಧಾರ್ಮಿಕ ನಂಬಿಕೆ ಅವರಲ್ಲಿತ್ತು. ಆದುದರಿಂದ ಹಾನಗಲ್ಲ ಪರಿಸರದ ಜನ ಸಕ್ರಿಯವಾಗಿ ತೊಡಗಿಸಿಕೊಳ್ಳುತ್ತಿದ್ದರು. ಹಾನಗಲ್ಲ ಪರಿಸರದ ಕೆರೆಗಳಿಗೆ ಸಂಬಂಧಿಸಿದಂತೆ ಕೆಲವು ಆಚರಣೆಗಳು ಇರುವುದನ್ನು ಗಮನಿಸಲಾಗಿದೆ.

ಕೆರೆ-ಬಾವಿಗಳಿಗೆ ಪ್ರಾಚೀನ ಕಾಲದಿಂದಲೂ ಮಹತ್ವ ಇರುವುದನ್ನು ನಾವು ಗ್ರಂಥಗಳಲ್ಲಿ ಕಾಣಬಹುದು. ಸಾಂಖ್ಯನ ಗೃಹಸೂತ್ರದಲ್ಲಿ ಕೆರೆ ಬಾವಿಗಳನ್ನು ಉಪಯೋಗಿಸುವ ಮೊದಲು ಅದಕ್ಕೆ ಪೂಜೆಮಾಡಿ ವರುಣ ದೇವನಿಗೆ ಸಂಬಂಧಿಸಿದ ಮಂತ್ರಗಳಲ್ಲಿ ಪೂಜೆ ಮಾಡಿದ ನಂತರವೇ ಕೆರೆ ಬಾವಿಗಳನ್ನು ಉಪಯೋಗಿಸಬೇಕು ಎಂಬ ಉಲ್ಲೇಖವು ತಿಳಿದುಬರುತ್ತದೆ.[೨]

ಒಬ್ಬ ಅರಸ ಕಟ್ಟಿಸಿದ ಕೆರೆಯಲ್ಲಿ ಪ್ರಾಣಿ-ಪಕ್ಷಿಗಳು ಮತ್ತು ಮನುಷ್ಯ ಕೆರೆಯ ನೀರನ್ನು ಕುಡಿದು ತೃಪ್ತರಾದರೆ ಅರಸ ಅಶ್ವಮೇದಯಾಗ ಫಲವನ್ನು ಪಡೆಯುತ್ತಾನೆ ಎಂಬ ಉಲ್ಲೇಖ ಮಹಾಭಾರತದಿಂದ ತಿಳಿದುಬರುತ್ತದೆ. ಹಾಗೇಯೆ ಅಗ್ನಿ ಪುರಾಣದ ೬೪ನೇ ಅಧ್ಯಾಯದಲ್ಲಿ ವರುಣದೇವರನ್ನು ಜಲದೇವರೆಂದು ಕರೆಯುತ್ತಾರೆ. ನೀರಿಗೆ ಸಂಬಂಧಿಸಿದ ಕೆಲವು ವಿಧಿ-ವಿಧಾನಗಳನ್ನು ಆಚರಣೆ ಕುರಿತು ಮಾಹಿತಿ ನೀಡುತ್ತದೆ. ಬಾವಿ, ಕೆರೆಗಳನ್ನು ಕಟ್ಟಿಸುವ ಮೊದಲು ಆ ಜಾಗದಲ್ಲಿ ಎಂಟು ವಾಡಿಕೆಗಳಲ್ಲಿ ಎಂಟು ಬಗೆಯ ನೀರನ್ನು ತುಂಬಿಸಿ ಅವುಗಳನ್ನು ಅಷ್ಟದಿಕ್ಕುಗಳಲ್ಲಿ ಅಷ್ಟದಿಕ್ಪಾಲಕರಿಗೆ ಪೂಜೆಸುವಾಗ ಅಷ್ಟದಿಕ್ಪಾಲರಲ್ಲಿ ಒಬ್ಬನಾದ

ವರುಣದ ಮೂರ್ತಿಯನ್ನು ಊರಿನಲ್ಲಿ ಮೇರವಣಿಗೆ ಮಾಡಿ ನಂತರ ನೀರಿನ ಪ್ರದೇಶದಲ್ಲಿ ಮುಳಗಿಸಬೇಕು ಈ ರೀತಿ ಮಾಡಿದವರಿಗೆ ಅಶ್ವಮೇಧಯಾಗದ ಫಲವು ಸಿಗುತ್ತದೆ ಎಂದು ಹೇಳುತ್ತಾರೆ.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಯಾವುದೇ ಒಂದು ಕಾರ್ಯ ಮಾಡಬೇಕಾದರೆ ಒಳ್ಳೆದಿನ ಮತ್ತು ಮೂಹರ್ತವನ್ನು ನೋಡಿ ಕೆಲಸವನ್ನು ಮಾಡುತ್ತಿದ್ದರು. ಹಾಗೆಯೇ ಕರೆ-ಬಾವಿಗಳನ್ನು ಕಟ್ಟಿಸುವಾಗ ಇಂತಹ ಘಳಿಗೆ ಮತ್ತು ದಿನವನ್ನು ನೋಡುತ್ತಿದ್ದರು ಎಂಬುದಕ್ಕೆ ಶಾಸನಗಳಲ್ಲಿ ವಿವರಣೆ ಇದೆ. ಉದಾಃ ಆಂಧ್ರಪ್ರದೇಶ ಕಡಪಾಜಿಲ್ಲೆಯಲ್ಲಿ ಕಂಡುಬರುವ ಪುರವಾಯಿಯಲ್ಲಿ ಬುಕ್ಕರಾಯನ ಕಾಲದಲ್ಲಿ ಕೆರೆಯನ್ನು ಕಟ್ಟಲಾಯಿತು. ಈ ಕೆರೆಯ ಆಧರಿಸಿ ಒಂದು ಶಾಸನವು ಮುಖ್ಯವಾದ ವಿಚಾರಗಳನ್ನು ತಿಳಿಸುತ್ತದೆ.[೩] ಕೆರೆಯನ್ನು ಒಂದು ಒಳ್ಳೆಯ ದಿನ ಮೂಹರ್ತದಲ್ಲಿ ಕಟ್ಟಲಾಯಿತು ಎಂದು ವಿವರಿಸಿದ ಆ ದಿನದ ವಿವರಣೆ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೪] ದಶವರ್ಷ ೧೨೩೧೮ ಸೌಮ್ಯ ಸಂವತ್ಸರ ಕಾರ್ತಿಕ ಶುದ್ಧ ೧೪ನೇ ದಿನ ಗುರುವಾರದ ಪುಷ್ಯ ನಕ್ಷತ್ರ ಕರ್ಕಾಟಕ ಲಗ್ನದಿನದಂದು ಕೆರೆಯ ಕಟ್ಟಡ ಎಲ್ಲಾ ಗ್ರಹಗಳು ಅನುಕೂಲಕರವಾಗಿದೆ ಎಂದು ವಿವರಣೆಯನ್ನು ನೀಡಿದೆ. ಧಾರವಾಡ ಜಿಲ್ಲೆಯ ಯುಗದ ಶಾಸನದಲ್ಲಿ ಶಕವರ್ಷ ೧೦೪೭ನೇ ಅಶ್ವಿನಿ ಸಂವತ್ಸರದ ಪುಷ್ಯ ೫ ಡಿಸೆಂಬರ್ ೨ ಬುದವಾರದಂದು ಸಾಮಂತ ಬಮ್ಮದೇವನು ಅಜ್ಜ ಮಾರ್ತಂಡಯ್ಯನು ಕೆರೆಗೆ ದಾನ ನೀಡುವ ವಿವರಣೆ ನೀಡಿದೆ.[೫]

ಕೆರೆಯ ಬಗೆಗೆ ಪ್ರಾಚೀನ ಕಾಲದಿಂದಲೂ ಮಹತ್ವ ಇರುವುದನ್ನು ನಾವು ಹಲವಾರು ಗ್ರಂಥಗಳಲ್ಲಿ ಕಾಣಬಹುದು. ಅತ್ಯಂತ ಪ್ರಾಚೀನವಾದ ಸಾಂಖ್ಯನ ಗೃಹಸೂತ್ರದಲ್ಲಿಯ ಉಲ್ಲೇಖವು ಅತ್ಯಂತ ಪ್ರಾಚೀನವಾದುದು. ಕೆರೆ, ಬಾವಿಗಳನ್ನು ಉಪಯೋಗಿಸುವ ಮೊದಲು ಅದಕ್ಕೆ ಪೂಜೆ ಮಾಡಿ ವರುಣದೇವನಿಗೆ ಸಂಬಂಧಿಸಿದ ಮಂತ್ರಗಳನ್ನು ಪೂಜೆ ಮಾಡಿದ ನಂತರವೇ ಕೆರೆ ಬಾವಿಗಳನ್ನು ಉಪಯೋಗಿಸಬೇಕು ಎಂಬ ಉಲ್ಲೇಖವು ಗ್ರಂಥದಲ್ಲಿ ತಿಳಿದು ಬರುತ್ತದೆ. ಹಾಗೆಯೇ ಒಬ್ಬ ಅರಸ ಕಟ್ಟಿಸಿದ ಕೆರೆಯಲ್ಲಿ ಪ್ರಾಣಿ-ಪಕ್ಷಿಗಳು ಮತ್ತು ಮನುಷ್ಯರು ಕೆರೆಯ ನೀರನ್ನು ಕುಡಿದು ತೃಪ್ತರಾದರೆ ಆ ಅರಸ ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ ಎಂಬ ಉಲ್ಲೇಖ ಮಹಾಭಾರತದಿಂದ ತಿಳಿದುಬರುತ್ತದೆ. ಹಾಗೆಯೇ ಅಗ್ನಿ ಪುರಾಣದ ೬೪ನೇ ಅಧ್ಯಾಯದಲ್ಲಿ ವರುಣ ದೇವನನ್ನು ಜಲದೇವನೆಮದೇ ವರ್ಣಿಸಲಾಗಿದೆ. ಅದರಂತೆ ನೀರಿಗೆ ಸಂಬಂಧಿಸಿದ ಕೆಲವು ವಿಧಿ-ವಿಧಾನಗಳು, ಆಚರಣೆಗಳು ಕುರಿತು ಮಾಹಿತಿ ನೀಡುತ್ತದೆ. ಬಾವಿ ಕೆರೆಗಳನ್ನು ಕಟ್ಟಿಸುವ ಮೊದಲು ಆ ಜಾಗದಲ್ಲಿ ಎಂಟು ಮಡಿಕೆಗಳಲ್ಲಿ

ಎಂಟು ಬಗೆಯ ನೀರನ್ನು ತುಂಬಿಸಿ ಅವುಗಳನ್ನು ಎಂಟು ದಿಕ್ಕಿನಲ್ಲಿ ಸ್ಥಾಪಿಸಿ ಅಷ್ಟದಿಕ್ಪಾಲಕರನ್ನು ಪೂಜಿಸಿದಾಗ ಆ ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ಮಳೆಯ ಅಧಿದೇವತೆ ವರುಣ ಮೂರ್ತಿಯನ್ನು ಊರಿನಲ್ಲಿ ಮೆರವಣಿಗೆ ಮಾಡಿ ನಂತರ ಕೊಳದ ನೀರಿನಲ್ಲಿ ಮುಳುಗಿಸಬೇಕು. ಈ ರೀತಿ ಮಾಡಿದವರಿಗೆ ಅಶ್ವಮೇಧಯಾಗದ ಫಲಕ್ಕಿಂತಲೂ ಹೆಚ್ಚಿನ ಫಲ ದೊರೆಯುತ್ತದೆ ಎಂದು ಪರಿಗಣಿಸಲಾಗಿದೆ.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಯಾವುದೇ ಒಂದು ಕಾರ್ಯ ಮಾಡಬೇಕಾದರೆ ಒಳ್ಳೆಯ ದಿನ ಮತ್ತು ಸಮಯ(ಮಹೂರ್ತ)ವನ್ನು ನೋಡಿ ಕಾರ್ಯವನ್ನು ಮಾಡುತ್ತಿದ್ದರು. ಹಾಗೆಯೇ ಕೆರೆ ಭಾವಿಗಳನ್ನು ಕಟ್ಟಿಸುವಾಗ ಸಹಿತ ಇಂತಹ ಸಮಯ ಮತ್ತು ದಿನವನ್ನು ನೋಡುತ್ತಿದ್ದರು ಎಂಬುದಕ್ಕೆ ಸಾಕಷ್ಟು ಶಾಸನಗಳಲ್ಲಿ ಉಲ್ಲೇಖ ಕಂಡುಬರುತ್ತದೆ. ಉದಾ: ಆಂದ್ರಪ್ರದೇಶದ ಕಡಪ ಜಿಲ್ಲೆಯಲ್ಲಿ ಕಂಡುಬರುವ ಪುರುಮಾಮಿಲ್ಲ ಕೆರೆಯನ್ನು ಮೊದಲನೆಯ ಬುಕ್ಕರಾಯನ ಕಾಲದಲ್ಲಿ (ಕ್ರಿ.ಶ. ೧೩೬೯ ರಲ್ಲಿ) ಕಟ್ಟಿಸಲಾಯಿತು ಎಂದು ಮತ್ತು ಈ ಶಾಸನವು ಕೆಲವು ಬಗೆಯ ಅತೀ ಮುಖ್ಯ ವಿಚಾರಗಳನ್ನು ತಿಳಿಸುತ್ತದೆ. ಅವುಗಳಲ್ಲಿ ಕೆರೆಯನ್ನು ಒಂದು ಒಳ್ಳೆಯ ದಿನ ಮಹೂರ್ತದಲ್ಲಿ ಕಟ್ಟಲಾಯಿತು ಎಂದು ವಿವರಿಸಲಾಗಿದೆ. ಆ ದಿನದ ವಿವರಣೆಯನ್ನು ಶಾಸನದಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಲಾಗಿದೆ. ಶಕವರ್ಷ ೧೨೩೧ರ ಸೌಮ್ಯ ಸಂವತ್ಸರ ಕಾರ್ತಿಕ ಶುದ್ಧ ೧೪ ನೇ ದಿನ ಗುರುವಾರದ ಪುಷ್ಯ ನಕ್ಷತ್ರ ಕರ್ಕಾಟಕ ಲಗ್ನದ ದಿನದಂದು ಕೆರೆಯನ್ನು ಕಟ್ಟಿಸಲು ಎಲ್ಲಾ ಗ್ರಹಗಳು ಅನುಕೂಲಕರವಾಗಿವೆ ಎಂಬ ಉಲ್ಲೇಖ ಕಂಡುಬರುತ್ತದೆ. ಹಾಗೆಯೇ ಹಾನಗಲ್ಲು ಪರಿಸರದ ಗುಡುಗುಡಿ ಶಾಸನದ ಪ್ರಕಾರ ಮೊದಲನೆಯ ಸೋಮೇಶ್ವರನ ಪತ್ನಿ ಮಹಾದೇವಿಯು ಕೆರೆ ಮತ್ತು ಬಾವಿಗಳನ್ನು ಕಟ್ಟಿಸಿದಳು.[೬]

ಇಂತಹ ಯಾವುದೇ ಕಾರ್ಯದ ಆರಂಭದಲ್ಲಿ ಭೂಮಿ ಪೂಜೆ ಮಾಡುವಾಗ ಬುನಾದಿ ಕಲ್ಲನ್ನು ಹಾಕುವಾಗ ಮೊದಲ ಬಾರಿಗೆ ನೀರು ಬಂದಾಗ ಅದಕ್ಕೆ ಒಡ್ಡುಗಳನ್ನು ಕಟ್ಟುವಾಗಲೂ ಸಹಿತ ಹಾಗೆಯೇ ಅದಕ್ಕೆ ಸಂಬಂಧಿಸಿದ ಶಾಸನಗಳನ್ನು ನೆಡುವಾಗಲೂ ಸಹಿತ ಹಲವು ಬಗೆಯ ಪೂಜೆಗಳನ್ನು ಮಾಡುತ್ತಿದ್ದರು. ಹಾಗೆಯೇ ಕೆಲವು ಸಮಾಜಕ್ಕೆ ಸಂಬಂಧಿಸಿದ ಜನರು ಹಲವು ಧಾರ್ಮಿಕ ಸಮಾರಂಭಗಳಲ್ಲಿ ಪ್ರಾಣಿಗಳ ಬಲಿದಾನ ನೀಡುವ ಪದ್ಧತಿಯನ್ನು ರೂಢಿಯಲ್ಲಿ ಇಟ್ಟುಕೊಂಡಿದ್ದಾರೆ. ಅದರಲ್ಲಿ ವಿಶೇಷವಾಗಿ ಕೆರೆ, ಬಾವಿಗಳ ಪೂಜೆಗಳಲ್ಲಿ ಬಲಿದಾನಗಳು ಹೆಚ್ಚಾಗಿ ಕಂಡುಬಂದಿವೆ. ಅದಕ್ಕೆ ಕಾರಣ ಬಾವಿ, ಕೆರೆಗಳು ದೆವ್ವಗಳ ವಾಸಸ್ಥಾನ ಅವುಗಳಿಗೆ ಬಲಿ ಕೊಡಬೇಕು ಎಂಬ ನಂಬಿಕೆ ಆಗಿನ ಜನರಲ್ಲಿ

ಕಂಡುಬಂದಿದೆ. ಕೆಲವು ವೇಳೆಯಲ್ಲಿ ಕೆರೆ ಬಾವಿಗಳು ನೀರಿಲ್ಲದೆ ಬರಿದಾದಾಗ ಅದು ಅಲ್ಲಿರುವ ಭೂತಗಳ ಚೇಷ್ಟೆ ಅದಕ್ಕಾಗಿ ಅವುಗಳಿಗೆ ಬಲಿ ಕೊಡಬೇಕು ಎಂದು ತಿಳಿದುಕೊಂಡಿದ್ದರು. ಹಾಗೆಯೇ ಮತ್ತೇ ಕೆಲವು ವೇಳೆ ಕೆರೆ, ಬಾವಿಗಳು ಸಾಕಷ್ಟು ತುಂಬಿದಾಗಲೂ ಸಹಿತ ಅದಕ್ಕೂ ಪ್ರಾಣಿ ಬಲಿಯನ್ನು ಕೊಡುತ್ತಿದ್ದರು. ಪ್ರಾಣಿ ಬಲಿಗಳಲ್ಲದೆ ಕೆಲವು ಸಂದರ್ಭದಲ್ಲಿ ನರಬಲಿಗಳನ್ನು ಕೊಟ್ಟಿರುವುದು ಹಲವಾರು ಕಡೆ ಕಂಡುಬರುತ್ತದೆ. ಇಂತಹ ಬಲಿದಾನದ ವ್ಯವಸ್ಥೆಯು ಋಗ್ವೇದ ಮತ್ತು ಯಜುರ್ವೇದ ಕಾಲದಲ್ಲಿಯು ಉಲ್ಲೇಖವಾಗಿದೆ.[೭]

ಋಗ್ವೇದದಲ್ಲಿ ವರುಣದೇವನಿಗೆ ನರಬಲಿ ನೀಡಿದ ಉದಾಹರಣೆಯಿದ್ದರೆ ಯಜುರ್ವೇದದಲ್ಲಿ ಕೋಟೆ–ಕೊತ್ತಲು, ಊರ ಹೆಬ್ಬಾಗಿಲು ಮತ್ತು ಕೆರೆಗಳನ್ನು, ಆಣೆಕಟ್ಟುಗಳನ್ನು ಕಟ್ಟುವಾಗ ನರಬಲಿಯನ್ನು ನೀಡಿ ಬಲಿಯಾದ ವ್ಯಕ್ತಿಯ ದೇಹವನ್ನು ಅವುಗಳ ಬುನಾದಿಗಳ ಅಡಿಪಾಯದಲ್ಲಿಯೇ ಹೂಳಬೇಕು ಎಂದು ತಿಳಿಸುತ್ತದೆ.

ಕೆರೆಗೆ ಬಲಿಯಾದ ಹೆಣ್ಣುಮಕ್ಕಳೆಲ್ಲಾ ಜೀವಂತ ಬಲಿಯಾಗಿ ಅವರು ಅಲ್ಲಿಯೇ ದೇವತೆಗಳಾಗಿ ನೆಲೆಗೊಂಡಿದ್ದಾರೆ ಎಂಬ ವಿವರಣೆಯನ್ನು ಹಾನಗಲ್ಲು ಪರಿಸರದ ಸಾಕಷ್ಟು ಮಾಸ್ತಿಕಲ್ಲುಗಳು ಹಾನಗಲ್ಲು ವಿವಿಧ ಭಾಗಗಳಲ್ಲಿ ಕಂಡುಬರುತ್ತವೆ. ದೊಡ್ಡ ದೊಡ್ಡ ಕೆರೆಗಳನ್ನು ಕಟ್ಟುವಾಗ ಹೆಂಗಸರನ್ನು ಮತ್ತು ಮಕ್ಕಳನ್ನು ಬಲಿ ನೀಡುತ್ತಾರೆ ಎಂಬುದನ್ನು ಇಂದಿಗೂ ಜನರು ನಂಬಿದ್ದಾರೆ. ಈ ಕಾರಣದಿಂದಲೇ ನಂಬಿಕೆಗಳು ಸೃಷ್ಟಿಯಾಗಿವೆ. ಅದಕ್ಕಾಗಿ ಹಳ್ಳಿಗಳಲ್ಲಿ ಯಾರೂ ಬಾವಿ ಹತ್ತಿರ ಹೋಗಬಾರದು ಅದು ಸೆಳೆದುಕೊಳ್ಳುತ್ತದೆ. ಕೆರೆ ಕಟ್ಟಡಕ್ಕೆ ಹೆಂಗಸರನ್ನು ಬಲಿ ಕೊಡಬೇಕು. ತುಂಬಿದ ಕೆರೆ ಬಾವಿ ತೋಡುವಾಗ ಜಲಕಣ್ಣು ಕಂಡ ತಕ್ಷಣ ಅದಕ್ಕೆ ರಕ್ತ ತೋರಿಸಬೇಕು ಈ ರೀತಿಯ ನಂಬಿಕೆ ಆಚರಣೆಗಳು ಈ ಜನರಲ್ಲಿ ಸಾಕಷ್ಟು ಕಂಡುಬಂದಿದೆ.

ಅದೇ ರೀತಿಯಾಗಿ ವಿಜಯನಗರ ಕಾಲದಲ್ಲಿಯೂ ನರಬಲಿಯು ಪ್ರಚಲಿತ ಇತ್ತೆಂದು ಕೆಲವು ಮೂಲಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೩೬೪ ರಲ್ಲಿ ಬುಕ್ಕರಾಯನ ಮಂತ್ರಿಯಾದ ಚಿಕ್ಕ ಒಡೆಯನು ಕೆರೆಯ ಏರಿಯನ್ನು ನಿರ್ಮಿಸುವಾಗ ಒಬ್ಬ ಬಾಲಕಿಯನ್ನು ಬಲಿ ಕೊಟ್ಟಿರುವುದಾಗಿ ದಾಖಲಾಗಿದೆ. ಹಾಗೆಯೇ ಕೃಷ್ಣದೇವರಾಯನು ನಿರ್ಮಿಸಿದಂತಹ ಬಹುದೊಡ್ಡ ಕೆರೆಯಾದ ರಾಯಕೆರೆಯನ್ನು ನಿರ್ಮಿಸುವಾಗ ಕೆರೆಯ ಏರಿಯು ಪದೇ ಪದೇ ಒಡೆಯುತ್ತಿರಲು ಅವನು ಬ್ರಾಹ್ಮಣರನ್ನು ಕಾರಣ ಏನೆಂದು ವಿಚಾರಿಸಿದಾಗ ಅದಕ್ಕೆ ಅವರು ನರಬಲಿ, ಕುದುರೆ ಮತ್ತು ಎಮ್ಮೆಗಳನ್ನು ಬಲಿ ನೀಡಬೇಕೆಂದು ತಿಳಿಸುತ್ತಾರೆ. ಅದರಂತೆ

ರಾಜನು ೬೦ ಜನರನ್ನು, ಕುದುರೆ ಹಾಗೂ ಎಮ್ಮೆಗಳನ್ನು ಬಲಿ ಕೊಡುತ್ತಾನೆ ಎಂಬ ವಿಷಯ ವಿದೇಶಿಯರ ಬರಹಗಳಲ್ಲಿ ದಾಖಲಾಗಿದೆ.

ಈ ರೀತಿಯಾದ ಕಥೆಗಳು ಮತ್ತು ಸಾಂಸ್ಕೃತಿಕ ಆಚರಣೆಗಳು ಹಾನಗಲ್ಲ ತಾಲೂಕಿನಲ್ಲಿಯೂ ಸಾಕಷ್ಟು ಕಂಡು ಬಂದಿವೆ. ಹಾನಗಲ್ಲ ತಾಲ್ಲೂಕಿನ ಎಲ್ಲಾ ಊರುಗಳಲ್ಲಿ ಗಣೇಶ ಚತುರ್ಥಿಯ ಸಮಯದಲ್ಲಿ ಗಣೇಶನ ಮೂರ್ತಿಯನ್ನು ೫, ೭, ೧೧ ದಿನಗಳವರೆಗೆ ಇಟ್ಟು ಪೂಜೆಯನ್ನು ಮಾಡಿ ಅದನ್ನು ಕೊನೆಯಲ್ಲಿ ಮೆರವಣಿಗೆಯ ಮೂಲಕ ಕೆರೆಗಳಲ್ಲಿ ವಿಸರ್ಜನೆ ಮಾಡುವರು. ಇದು ಮೊದಲಿನಿಂದಲೂ ಇಂದಿನವರೆಗೆ ಆಚರಣೆಯಲ್ಲಿರುವ ಪದ್ಧತಿಯಾಗಿದೆ. ಹಾಗೆಯೇ ಹಾನಗಲ್ಲ ಪ್ರದೇಶದಲ್ಲಿಯ ಆನೆಕೆರೆಯ ಲಕ್ಷಣವನ್ನು ಅವಲೋಕನ ಮಾಡಿದಾಗ ಕೆರೆಯ ಮೊದಲನೆಯ ಪ್ರವೇಶ ವೀರಗಲ್ಲು ಇದ್ದು, ಅದನ್ನು ದಿನನಿತ್ಯ ಇಂದಿಗೂ ಪೂಜೆಯನ್ನು ಮಾಡುತ್ತಾರೆ. ಅದೇ ಕೆರೆಯ ಮಧ್ಯದಲ್ಲಿ ಆಂಜನೇಯ ಮೂರ್ತಿಯಿದ್ದು ಅದನ್ನು ಕೂಡಾ ಅಲ್ಲಿನ ಜನ ಪೂಜೆ ಮಾಡುವರು. ಅಲ್ಲದೇ ಕದಂಬರ ಕಾಲದಲ್ಲಿ ಆನೆಕೆರೆಯಲ್ಲಿ ಆನೆಗಳಿಗೆ ಸ್ನಾನ ಮಾಡಿಸುತ್ತಿದ್ದರು. ಅದರಿಂದ ಈ ಕೆರೆಗೆ ಆನೆಕೆರೆ ಎಂಬ ಹೆಸರು ಬಂದಿರಬಹುದು. ಪಕ್ಕದಲ್ಲಿ ಬಿಲ್ಲೇಶ್ವರ ದೇವಸ್ಥಾನವಿದೆ. ಇಲ್ಲಿನ ಆನೆಕೆರೆಯು ಹಾನಗಲ್ಲ ನಗರಕ್ಕೆ ದೊಡ್ಡ ಕೆರೆಯಾಗಿದ್ದು, ನಗರಕ್ಕೆ ನೀರು ಸರಬರಾಜು ಮಾಡಲಾಗುತ್ತಿದೆ.

ಕೆಲವು ವರ್ಷಗಳು ಬರಗಾಲದ ಸ್ಥಿತಿಯಲ್ಲಿ ಕೆರೆಯಲ್ಲಿ ನೀರು ಇಲ್ಲದೆ ಬರಿದಾದಾಗಲೂ ಹಲವಾರು ಆಚರಣೆಗಳು ಮಾಡಿರುವುದು ಕಂಡುಬಂದಿದೆ. ಕೆರೆಗಳಿಗೆ ನೀರು ಬರಲೆಂದು ಅವುಗಳನ್ನು ಪೂಜೆ ಮಾಡುವದು, ಅವುಗಳಿಗೆ ಬಲಿ ಕೊಡುವುದು ಹೀಗೆ ಮಾಡುವುದರಿಂದ ಕೆರೆಯಲ್ಲಿ ನೀರು ಬರುತ್ತದೆ ಎಂಬ ನಂಬಿಕೆ ಜನರಲ್ಲಿತ್ತು. ಹಾಗೆಯೇ ಅಪಾರ ಮಳೆ ಬಂದು ಅತಿವೃಷ್ಟಿಯಾಗಿ ಕೆರೆಯ ಕೋಡಿ ಒಡೆದು ನೀರು ಹರಿದಾಗಲೂ ಅದನ್ನು ಪೂಜೆ ಮಾಡುವ ಪದ್ಧತಿಯು ಕಂಡು ಬಂದಿದ್ದು, ಈ ಎರಡು ಸಂದರ್ಭದಲ್ಲಿ ಕೆರೆಗಳಿಗೆ ಕುರಿ–ಕೋಳಿಗಳನ್ನು ಬಲಿ ಕೊಡುವುದು ಸಾಮಾನ್ಯವಾಗಿತ್ತು ಎಂಬುದು ಅಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ತಿಳಿದುಬಂದ ವಿಷಯವಾಗಿದೆ.

ಅದೇ ರೀತಿಯಲ್ಲಿ ಹಿರೂರು ಕೆರೆಗೆ ಭೇಟಿ ನೀಡಿದಾಗ ಅಲ್ಲಿಯ ಜನರು ಊರು ದೇವಿಯ ಜಾತ್ರೆಯ ಮತ್ತು ಬಸವಣ್ಣ ದೇವಾಲಯದ ಜಾತ್ರೆಯ ಸಂದರ್ಭದಲ್ಲಿ ದೇವರನ್ನು ಪಲ್ಲಕ್ಕಿಯಲ್ಲಿ ಮೆರವಣಿಗೆಯ ಮೂಲಕ ಕೆರೆಯವರೆಗೂ ಬಂದು ಕೆರೆಯ ನೀರಿನಿಂದ ದೇವರನ್ನು ಪೂಜೆ ಮಾಡುವ ಪದ್ಧತಿಯು ಅಲ್ಲಿ ಪ್ರಮುಖವಾಗಿದೆ. ಈ ಒಂದು ಆಚರಣೆಯು

ಅಲ್ಲಿ ಮೊದಲಿನಿಂದಲೂ ಕಂಡುಬಂದಿದೆ ಎಂದು ಅಲ್ಲಿಯ ಹಿರಿಯ ನಾಗರಿಕರೊಬ್ಬರಿಂದ ತಿಳಿದು ಬಂದಿದೆ.

ಹಾಗೆಯೇ ಬರಗಾಲದ ಸಂದರ್ಭದಲ್ಲಿ ಊರಿನ ಕೆರೆಗಳು ಬತ್ತಿ ಹೋದಾಗ ಅಲ್ಲಿನ ಜನರೆಲ್ಲರು ಊರಿನ ದೇವರ ಗುಡಿಗೆ ತಮ್ಮ ತಮ್ಮ ಮನೆಯಿಂದ ಅರಿಶಿನ, ಕುಂಕುಮ, ಲಿಂಬೆಹಣ್ಣು, ತೆಂಗಿನಕಾಯಿ ಅಲ್ಲದೇ ದೇವತೆಯ ವಸ್ತ್ರಾಭರಣಗಳು ತೆಗೆದುಕೊಂಡು ಹೋಗಿ ದೇವತೆಗೆ ವಿಶೇಷ ಪೂಜೆಯನ್ನು ಸಲ್ಲಿಸುವುದು ಮತ್ತು ಊರಿನ ಕೆರೆಯ ಅಭಿವೃದ್ಧಿಗಾಗಿ ಶ್ರಮ ದಾನವನ್ನು ಮಾಡುವದು ಸಹಿತ ತಿಳಿದುಬಂದಿದೆ. ಹೀಗೆ ಮಾಡುವುದರಿಂದ ಊರಲ್ಲಿ ಧಾರಾಕಾರವಾಗಿ ಮಳೆಯಾಗಿ ಕೆರೆಗಳು ತುಂಬುತ್ತವೆ ಎಂಬ ನಂಬಿಕೆ ಜನರಲ್ಲಿದೆ. ಈ ಆಚರಣೆಯು ಹಿಂದಿನಿಂದ ಇಂದಿನವರೆಗೂ ರೂಢಿಯಲ್ಲಿರುವುದನ್ನು ಕಾಣಬಹುದು.

**ಪರು ಆಚರಣೆ :**

ಮಳೆಯ ಪ್ರಮಾಣ ಕಡಿಮೆ ಆದಾಗ ಅಥವಾ ಮಳೆಯು ಬಾರದೆ ಹೋದಾಗ ಊರಿನ ಮುಖಂಡರೆಲ್ಲರೂ ಸೇರಿ ಒಂದು ನಿರ್ಣಯ ಮಾಡಿಕೊಂಡು ಪರು ಎಂಬ ಪೂಜೆಯನ್ನು ಆಚರಣೆ ಮಾಡುವರು. ಅದಕ್ಕಾಗಿ ಅವರು ಒಂದು ವಾರವನ್ನು ಆಯ್ಕೆ ಮಾಡಿಕೊಳ್ಳುವರು. ಅದಕ್ಕೆ ಅವರು ವಾರ ಬಿಡುವದು ಎಂದು ಕರೆಯುತ್ತಾರೆ. ಆ ಪೂಜೆ ಪ್ರಾರಂಭವಾದ ವಾರದಿಂದ ಹೆಣ್ಣುದೇವರಿಗೆ ಸಂಬಂಧಿಸಿದ ದಿನಗಳಲ್ಲಿ ಅವು ಸಾಮಾನ್ಯವಾಗಿ ಮಂಗಳವಾದ ಮತ್ತು ಶುಕ್ರವಾರದ ದಿನ ಊರಿನಲ್ಲಿ ಯಾರ ಮನೆಯಲ್ಲೂ ರೊಟ್ಟಿ ಅಥವಾ ಸಿಹಿ ತಿಂಡಿಯ ಅಡುಗೆಯನ್ನು ಮಾಡುವ ಹಾಗಿಲ್ಲ. ಆ ತಿಂಗಳದ ಕೊನೆಯ ದಿನ ಅಂದರೆ ಅದು ಕೊನೆಯ ಶುಕ್ರವಾರ ಅಥವಾ ಮಂಗಳವಾರದ ದಿನ ಎಲ್ಲರ ಮನೆಯ್ಲುಲಿ ಸಿಹಿ ಅಡುಗೆಯನ್ನು ಮಾಡಿ ಮೆರವಣಿಗೆಯ ಮೂಲಕ ಊರಿನ ಎಲ್ಲ ದೇವಾಲಯಗಳಿಗೆ ಭೇಟಿ ನೀಡಿ ಕೊನೆಯಲ್ಲಿ ಕೆರೆಗೆ ಹೋಗಿ ಅಲ್ಲಿ ಕೆರೆಯನ್ನು ಪೂಜೆ ಮಾಡಿ ಅಲ್ಲಿಯೇ ಎಲ್ಲರೂ ಊಟವನ್ನು ಮಾಡುವರು. ಹೀಗೆ ವಾರ ಬಿಟ್ಟು ದೇವತೆಯರ ಮಾಡುವುದರಿಂದ ಊರಿಗೆ ಮಳೆ ಬರುತ್ತದೆ ಎಂಬ ನಂಬಿಕೆ ಆ ಊರಿನ ಜನರಲ್ಲಿದೆ.[೮]

ಇಲ್ಲಿಯ ಅರಳೇಶ್ವರ ಎಂಬ ಊರಿನಲ್ಲಿಯ ಒಂದು ಕೆರೆಗೆ ಭೇಟಿ ನೀಡಿದಾಗ ಅದೊಂದು ವಿಶೇಷವಾದ ಕೆರೆಯಾಗಿತ್ತು ಎಂಬ ವಿಷಯ ತಿಳಿದು ಬಂದಿತು. ಕಾರಣ ಆ ಕೆರೆಯ ಕೆಳಗೆ ಕದಂಬೇಶ್ವರ ದೇವಾಲಯವಿದ್ದು, ಸುಮಾರು ಕ್ರಿ.ಶ. ೧೧ನೇ ಶತಮಾನದಲ್ಲಿಯೇ ಈ ದೇವರಿಗೆ ಜಾತ್ರೆಯು ಮತ್ತು ನದಿಗೆ ಹೋಗುವ ಜನರು ಅಲ್ಲಿ ಪೂಜೆಯನ್ನು ಮಾಡಿ ಅಲ್ಲಿಂದ ಹೊಂಡದ ಕೆಳಗೆ ಇರುವ ಕಲ್ಲೇಶ್ವರ ದೇವಾಲಯಕ್ಕೆ ಪೂಜೆ

ಮಾಡಿ ಬೆಳೆಗಳು ಮತ್ತು ಊರಿನ ಮೇಲೆ ಯಾವುದೇ ಕೆಟ್ಟ ದೃಷ್ಟಿ ಬೀಳಬಾರದು ಪ್ರಾರ್ಥಿಸುತಿದ್ದದು ತಿಳಿದುಬರುತ್ತದೆ.

ತಾಲೂಕಿನ ಕೆಲವು ಗ್ರಾಮಗಳಲ್ಲಿ ೧೦, ೨೦ ಮಹಿಳೆಯರು ಸೇರಿ ಮಣ್ಣಿನ ಮಡಿಕೆಗಳಲ್ಲಿ ಪಂಚಾಮೃತವನ್ನು (ಹಾಲು, ಮೊಸರು, ಬೆಣ್ಣೆ, ತುಪ್ಪ, ಮಜ್ಜಿಗೆ) ತುಂಬಿಕೊಂಡು ತಲೆ ಮೇಲೆ ಹೊತ್ತುಕೊಂಡು ಮಳೆರಾಯನಿಗೆ ಸಂಬಂಧಿಸಿದ ಹಾಗೂ ಗಂಗಮ್ಮನಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾ ಆ ಗ್ರಾಮದ ಪ್ರತಿಯೊಂದು ಮನೆಗೂ ಭೇಟಿ ನೀಡಿ ಆ ಮಡಿಕೆಗಳನ್ನು ಪೂಜೆ ಮಾಡಿಸಿಕೊಂಡು ಜೊತೆಗೆ ಧವಸ, ಧಾನ್ಯ ಮತ್ತು ಹಣದ ರೂಪದಲ್ಲಿ ಅವರಿಗೆ ಕಾಣಿಕೆ ರೂಪದಲ್ಲಿ ಕಾಣಿಕೆಯನ್ನು ಪಡೆದುಕೊಂಡು ಕೊನೆಗೆ ಊರೆಲ್ಲ ಸುತ್ತಿದ ಮೇಲೆ ಕೆರೆ ಹತ್ತಿರ ಹೋಗಿ ಆ ಮಡಿಕೆಗಳನ್ನು ಪೂಜೆ ಮಾಡಿ ಪ್ರಸಾದವನ್ನು ಸೇವಿಸಿ ಬರುವಾಗ ಮಡಿಕೆಗಳನ್ನು ಕೆರೆಯಲ್ಲಿ ಬಿಟ್ಟು ಬಿಡುತ್ತಾರೆ.

ಈ ರೀತಿಯ ಆಚರಣೆ ಮಾಡುವುದರಿಂದ ಮಳೆ ಬರುತ್ತದೆ ಎಂಬ ನಂಬಿಕೆ ಜನಸಾಮಾನ್ಯರಲ್ಲಿ ಮನೆಮಾಡಿದೆ. ಇಂತಹ ಆಚರಣೆಗಳು ಇತ್ತೀಚೆಗೆ ಕಡಿಮೆ ಪ್ರಮಾಣದಲ್ಲಿ ಕೆಲವೇ ಕೆಲವು ಹಳ್ಳಿಗಳಲ್ಲಿ ಕಾಣಬಹುದು.

**ಕೆರೆಗೆ ಹಾರ :**

"ಕಲ್ಲಿನಕೇರಿ ಮಲ್ಲನಗೌಡ ಕೆರೆಯೊಂದು ಕಟ್ಟಿಸ್ಯಾನು
ಕೆರೆಯೊಂದು ಕಟ್ಟಿಸ್ಯಾನು ಸೆರೆಮುಕ್ಕ ನೀರಿಲ್ಲ
ಸೆರೆಮುಕ್ಕ ನೀರಿಲ್ಲ ಹೊತ್ತಿಗೆ ತೆಗಸ್ಯಾರು
ಹೊತ್ತಿಗೆ ತೆಗದ್ಯಾರು ಜೋಯಿಸ ಕೇಳ್ಯಾರು
ಕಿರಿ ಸೊಸಿ ಭಾಗೀರಥಿನ್ನ ಹಾರವ ಕೊಡಬೇಕು
ಹಾರಾ ಕೊಡಬೇಕೆಂದು ಮಾತಾತು ಮನಿಯಾಗ
ಸಣ್ಣಸೊಸಿ ಭಾಗೀರಥಿ ತವರ ಮನೆಗೆ ಹೊಂಟಾಳ
ಅತ್ತೆಮ್ಮ ನಾ ನಮ್ಮ ತವರ ಮನೆಗೆ ಹೋಗುತೀನಿ
ಸರ್ರನೆ ಹೋಗವ್ವಾ ಭರ್ರನೆ ಬಾರವ್ವ
ಸಣ್ಣ ಸೊಸೆ ಭಾಗೀರಥಿ ತವರುಮನೆಗೆ ಹೋದಾಳು
ಮನೆ ಮುಂದ ಹೋಗುವದಕ ಅವರಪ್ಪ ಬಂದಾನು
ಎಂದಿಲ್ಲದ ಭಾಗೀರಥಿ ಇಂದ್ಯಾಕ ಬಂದವ್ವ
ಬಾಡಿದ ಮಾರ್‍ಯಾಕ ಕಣ್ಣಗ ನೀರ್‍ಯಾಕ
ಸಣ್ಣ ಸೊಸಿ ಭಾಗೀರಥಿ ತವರ ಮನಿಯ ಬಿಟ್ಟು
ತವರ ಮನಿಯ ಬಿಟ್ಟು ಗೆಣತಿ ಮನೆಗೆ ನಡೆದಳು
ತಲಬಾಗಿಲದಾಗ ಗೆಳತಿನ್ನ ಕಂಡಳು.
ಸಣ್ಣ ಸೊಸಿ ಬಂಗವ್ವ ನೀನರೆ ಜಳಕಮಾಡು
ಸಣ್ಣ ಸೊಸಿ ಭಾಗೀರಥಿ ಜಳಕನ ಮಾಡ್ಯಾಳು
ಜಳಕನ ಮಾಡ್ಯಾಳು ಸಿಂಗಾರಸಿಂಬಿ ಮಾಡ್ಯಾಳು
ಸಿಂಗಾರಸಿಂಬಿ ಮಾಡ್ಯಾಳು ಮುಂದ ಮುಂದ ಹೊರಟಾಳು

ಮುಂದ ಮುಂದ ಭಾಗೀರಥಿ ಹಿಂದಿಂದ ಎಲ್ಲರೊ
ಸಣ್ಣ ಭಾಗೀರಥಿ ನೀ ತರಹೋಗವ್ವ
ಸಣ್ಣಸೊಸಿ ಭಾಗೀರಥಿ ಬಿರಿ ಬಿರಿ ನಡೆದಾಳು
ಬಿರಿ ಬಿರಿ ಹೋದಾಳು ಬಂಗಾರ ಬಟ್ಲ ತಗೊಂಡಳು
ಒಂದು ಮೆಟ್ಲೇರುದಕ ಪಾದಕ ಬಂದಾಳು ಗಂಗಿ
ಎರಡು ಮೆಟ್ಲೇರುದಕ ಪಾದ ಮುಣಿಗಿಸ್ಯಾಳು ಗಂಗಿ
ಮೂರು ಮೆಟ್ಲೇರುದಕ ಮೊಣಕಾಲಿಗೆ ಬಂದು ಗಂಗಿ
ನಾಲ್ಕು ಮೆಟ್ಲೇರುದಕ ನಡುಮಟ ಬಂದಾಳು ಗಂಗಿ
ಐದು ಮೆಟ್ಲೇರುದಕ ತುಂಬಿ ಹರಿದಾಳು ಗಂಗಿ
ಸಣ್ಣ ಸೊಸಿ ಭಾಗೀರತಿ ಕೆರೆಗ್ಹಾರವಾದಳು"

ಊರಿನ ಹಿತಕ್ಕಾಗಿ ನಾಡಿನ ಕ್ಷೇಮಕ್ಕಾಗಿ ಕೆಲಸಗಳನ್ನು ಕೈಗೊಂಡಾಗ ಅಡೆತಡೆಗಳು ಒದಗುವುದು ಸಹಜ. ದನಕರುಗಳಿಗೂ, ಪೈರುಪಚ್ಚೆಗಳಿಗೂ ನೀರು ಒದಗಲೆಂದು ಬಲು ವೆಚ್ಚದಿಂದ ಕೆರೆಯನ್ನು ಕಟ್ಟಿದರೆ ನೀರೇ ಬೀಳದಿರಬಹುದು. ಪ್ರಜೆಗಳು ಸುರಕ್ಷಿತವಾಗಿರಲೆಂದು ಕೋಟೆಯನ್ನು ಎಬ್ಬಿಸಿದರೆ ಗೋಡೆಯೇ ಭದ್ರವಾಗಿ ನಿಲ್ಲದಿರಬಹುದು. ಇಂಥ ಸಂದರ್ಭದಲ್ಲಿ ನಮ್ಮ ಹಿಂದಿನವರು ಇಲ್ಲಿಯೂ ದೈವಿಕವಾದ ಕಾರಣವಿರಬೇಕೆಂದು ನಂಬಿ ಜೋಯಿಸರನ್ನು ವಿಚಾರಿಸುತ್ತಿದ್ದರು. ಗೃಹಶಾಂತಿಯನ್ನು, ಭೂತ ಬಲಿಯನ್ನು ನಡೆಸಿ ಮುಂದುವರೆಯುತ್ತಿದ್ದರು. ಅಂತು ಊರೊಟ್ಟಿನ ಹಿತಕ್ಕಾಗಿ ಆಗಿನ ಬಲ್ಲವರು ಹೇಳಿದ ತ್ಯಾಗಕಾರ್ಯವನ್ನು ಅದು ಎಷ್ಟೇ ಕಠಿಣವಾಗಿದ್ದರೂ ಕೈಗೊಳ್ಳಲು ಅವರು ಹಿಂದೆ ಮುಂದೆ ನೋಡುತ್ತಿರುಲಿಲ್ಲ.

ಕಲ್ಲಿನ ಕೆರೆ ಎಂಬ ಊರಿನಲ್ಲಿ ಮಲ್ಲನಗೌಡ ಎಂಬ ಜಮೀನ್ದಾರನು ಕೆರೆಯೊಂದು ಕಟ್ಟಿಸಲು ಆರಂಭಿಸಿದನು. ಆದರೆ ಕೆರೆಯು ಎಷ್ಟು ಅಗೆದರೂ ನೀರೇ ಬರಲಿಲ್ಲ. ಆಗ ಮಲ್ಲನಗೌಡರು ಹೊತ್ತಿಗೆಯನ್ನು ತೆಗೆಯಿಸಿ ಪ್ರಶ್ನೆ ನೋಡಿದಾಗ ಜೋಯಿಸಲು ಇದು ದೇವರ ಕಾಟ, ದೆವ್ವದ ಕಾಟ "ಹಿರಿಸೊಸೆ ಮಲ್ಲವ್ವನ ಹಾರವ ಕೊಡಬೇಕು. ಆಕೆಯನ್ನು ಆಹಾರವಾಗಿ ಒಪ್ಪಿಸಿದರೆ ಕೆರೆಯಲ್ಲಿ ನೀರು ಬೀಳುತ್ತದೆ" ಎಂದರು. ಉತ್ತರ ಕರ್ನಾಟಕದ ಜನರ ಮಾತಿನಲ್ಲಿ "ಆಹಾರ" ಎಂಬುವದು ಹಾರ ಎಂದಾಗಿದೆ. ಗೌಡನ ಮನೆಯಲ್ಲಿ ಆಲೋಚನೆಗಿಟ್ಟಿತು. ಹಿರಿಯ ಸೊಸೆಯನ್ನು ಹಾರವಾಗಿ ಕೊಟ್ಟರೆ ಹೇಗೆ? ಮನೆತನದ ಹಿರಿಯ ಸಂತತಿ ಮುಂದುವರಿಯುವದು ಬೇಡವೆ? ಬಲಿಯನ್ನಂತು ಕೊಡಲೇ ಬೇಕು ಇಲ್ಲವಾದರೆ ಕೈಹಿಡಿದ ಧರ್ಮಕಾರ್ಯ ಕೆಟ್ಟು ಹೋಗುತ್ತದೆ ಎಂದು ಯೋಚಿಸಿ ತನ್ನ ಸಣ್ಣ ಸೊಸೆಯಾದ ಭಾಗೀರಥಿಯನ್ನು ಹಾರ ಕೊಡಲು ತೀರ್ಮಾನಿಸಿದರು. ಈ ವಿಷಯ ಅವಳ ಕಿವಿಗೆ ಬಿದ್ದೇ ಹೋಯಿತು. ಆದರೆ ಅವಳ ಜೊತೆ ಹಿರಿಯರು ನೇರವಾಗಿ ಪ್ರಸ್ತಾಪಿಸಲಾರರು. ಇವಳು ಅವರಿಗೆ ಎದುರು ನಿಂತು ಪ್ರಶ್ನೆ ಕೇಳಲಾರಳು. ಹಾಗೆ ಕೇಳಿದರೆ ಅದು ಹಿರಿಯರ

ಸಂಪ್ರದಾಯಕ್ಕೆ ವಿರೋಧ ಎಂದು ತಿಳಿದು ಸಿದ್ಧಳಾದಳು. ಆದರೆ ಒಮ್ಮೆ ತವರು ಮನೆಗೆ ಹೋಗಿ ಬರಬೇಕು ಎಂಬ ಆಸೆ ಅವಳಲ್ಲಿ ಮೂಡಿತು. ಅತ್ತೆ ಮಾವನಿಗೆ ಕೇಳಿದಳು ಅವರ ಕೈಕಟ್ಟಿಹೋಗಿದೆ. ಸೊಸೆ ತವರಿಗೆ ಹೊಗಿ ಬರಲು ಒಪ್ಪಿಗೆ ಕೊಟ್ಟು ಸರ್ರನೆ ಹೋಗಿ ಭರ್ರನೆ ಬಾರವ್ವಾ ಎಂದು ಹೇಳಿ ಕಳುಹಿಸಿದರು.

ಭಾಗೀರಥಿ ಮನೆ ಮುಂದೆ ಹೋಗುವದಕ್ಕೆ ಅವರಪ್ಪ ಬಂದು "ಎಂದಿಲ್ಲದ ಭಾಗೀರಥಿ ಇಂದ್ಯಾಕ ಬಂದವ್ವ ಬಾಡಿದ ಮಾರ್‍ಯಾಕ ಕಣ್ಣಾಗ ನೀರ್‍ಯಾಕ?" ಎಂದು ಕೇಳಿದಾಗ ಆದರೆ ಭಾಗೀರಥಿ ವಿಷಯ ಹೇಳಲು ಬಾಯಿ ಬರಲಿಲ್ಲ. ನನ್ನ ಮಾವ ಅತ್ತೆ ನನ್ನನ್ನು ಬೇರೆ ಇಡುತ್ತಾರಂತೆ ಎಂದು ಉತ್ತರಿಸಿದಳು. ಅದಕ್ಕೆ ತಂದೆ "ಇಟ್ಟರೆ ಇಡಲೇಳು ಹೊಲಮನೆ ಕೊಡತೇನು" ಎಂದು ದಿಟ್ಟತನದಿಂದ ಉತ್ತರಿಸಿದನು. ತಾಯಿಗೆ ಭೇಟಿಯಾದಾಗ ತಾಯಿಗೂ ಅದೇ ಹಾಗೆಯೇ ಹೇಳಿದಳು. ಅದಕ್ಕೆ ತಾಯಿ ಓಲೆಯ ಜೋಡನ್ನು ಕೊಡುತ್ತೇನೆ ಎಂದು ಸಮಾಧಾನ ಹೇಳಿದಳು. ಹಾಗೆಯೇ ಅವಳ ಅಕ್ಕನು ನಿನ್ನ ರಕ್ಷಣೆಗೆ ಮಕ್ಕಳನ್ನು ಕಳುಹಿಸುತ್ತೇನೆ ಎಂದು ಆಶ್ವಾಸನೆ ಕೊಟ್ಟಳು.

ಮನೆಯವರ ಎಲ್ಲರ ಮಾತಿಗೂ ಸಮಾಧಾನವಾಗದ ಭಾಗೀರಥಿಯು ತನ್ನ ಗೆಳತಿಯ ಮನೆಗೆ ಹೋದಳು. ಧೈರ್ಯವಾಗಿ ಅವಳ ಮುಂದೆ ವಿಷಯ ಹೇಳಿದಾಗ ಗೆಳತಿ "ಹಾರ ಕೊಟ್ಟರೆ ಕೊಡಲೇಳು ಇಟ್ಟಾಂಗ ಇರಬೇಕು" ಎಂಬುವುದೇ ಅವಳ ನಿರ್ಧಾರವಾದ ಬುದ್ಧಿವಾದ. ಇದನ್ನು ಭಾಗೀರಥಿ ಬಲಿದಾನಕ್ಕಾಗಿ ಎದೆಯನ್ನು ಗಟ್ಟಿ ಮಾಡಿಕೊಂಡು ಅತ್ತೆಯ ಮನೆಗೆ ಹಿಂತಿರುಗಿದಳು.

ಆ ದಿನ ಮನೆಯಲ್ಲಿ ದೊಡ್ಡ ಹಬ್ಬದ ಅಡುಗೆ ಜಳಕಕ್ಕಾಗಿ ಹತ್ತು ಕೊಪ್ಪರಿಗೆ ನೀರು ಬಿಸಿಯಾಗುತ್ತಿತ್ತು. ಅತ್ತೆ ನಿಂಗವ್ವ ನೀಲವ್ವ ಮೊದಲಾದ ಸೊಸೆಯರೆನ್ನೆಲ್ಲಾ ಕ್ರಮವಾಗಿ ಕರೆದಳು. ಈ ವಿಷಯ ತಿಳಿದ ಎಲ್ಲ ಹಿರಿಯ ಸೊಸೆಯಂದಿರು ನಾವೊಲ್ಲೆ, ನಾವೊಲ್ಲೆ ಎಂದು ಹಿಂಜರಿದರು. ಆದರೆ ಸಣ್ಣ ಸೊಸೆಗೆ ನೀನ್ನಾದ್ರು ಜಳಕ ಮಾಡು ಎಂದಾಗ ಭಾಗೀರಥಿ ಜಳಕ ಮಾಡಿ ಸಿಂಗರಿಸಿಕೊಂಡು ಬಂಗಾರದ ಬುಟ್ಟಿ ತಲೆಯ ಮೇಲೆ ಇಟ್ಟುಕೊಂಡು ಭಾಗೀರಥಿ ಮುಂದ ಮುಂದ ಹೊರಟಾಳು ಹಿಂದಿಂದ ಎಲ್ಲರೂ ಇದ್ದರು.

ಕೆರೆಯಲ್ಲಿ ಎಲ್ಲರೂ ಸೇರಿ ಪೂಜೆ ಮಾಡಿ ನೈವೇದ್ಯವಾಯಿತು. ಊಟವಾಯಿತು. ಎಲ್ಲವೂ ಮುಗದ ನಂತರ ಎಲ್ಲರೂ ಪಾತ್ರೆ ಪದಾರ್ಥಗಳನ್ನು ಕಟ್ಟಿಕೊಂಡು ಹಿಂದಕ್ಕೆ (ಮನೆ ಕಡೆಗೆ) ಹೊರಟು ಸ್ವಲ್ಪ ದೂರ ಹೋದ ಮೇಲೆ ಉದ್ದೇಶಪೂರ್ವಕವಾಗಿ ಬಂಗಾರದ ಬುಟ್ಟಿಯನ್ನು ಕೆರೆಯಲ್ಲೇ ಮರೆತುಬಿಟ್ಟರು. "ಗಂಗವ್ವ ನೀ ಹೋಗ, ಗೌರವ್ವ ನೀ ಹೋಗ

ಮುಂತಾಗಿ" ಒಬ್ಬೊಬ್ಬ ಸೊಸೆಗೂ ಬುಟ್ಟಿಯನ್ನು ತರಲು ಹೇಳಿದಳು. ಆದರೆ ಎಲ್ಲರೂ ಒಂದೊಂದು ನೆಪವನ್ನು ಹೇಳಿ ಹೋಗಲು ನಿರಾಕರಿಸಿದರು. ಆಗ ಸಣ್ಣ ಸೊಸಿ ಭಾಗೀರಥಿ ನೀ ಹೋಗವ್ವ ಎಂದಾಗ ಭಾಗೀರಥಿ ಹೋಗಿ ಬಂಗಾರದ ಬಟ್ಟಲು ತೆಗೆದುಕೊಂಡು ಒಂದು ಮೆಟ್ಟಿಲು ಹತ್ತುವದಕ್ಕೆ ಗಂಗೆಯು ಉಕ್ಕಿ ಅವಳ ಪಾದಕ್ಕೆ ಬಂದಳು. ಅವಳು ಎರಡನೇ ಮೆಟ್ಟಿಲು ಹತ್ತಿದಾಗ ಅವಳ ಪಾದಗಳು ನೀರಿನಲ್ಲಿ ಮುಳುಗಿದವು. ಮೂರನೇ ಮೆಟ್ಟಿಲು ಹತ್ತಿದಾಗ ನೀರು ಅವಳ ಮೊಣಕಾಲಿಗೆ ಬಂದಿತು. ನಾಲ್ಕನೇ ಮೆಟ್ಟಿಲಕ್ಕೆ ನಡುಮಟ ಬಂದಾಳು ಗಂಗೆ, ಐದನೇ ಮೆಟ್ಟಿಲಕ್ಕೆ ಕೆರೆಯು ತುಂಬಿ ಹರಿದು ಸಣ್ಣ ಸೊಸಿ ಭಾಗೀರಥಿಯು ಕೆರೆಗ್ಹಾರವಾದಳು. ಈ ರೀತಿಯ ಕಥೆಯ ಆಧಾರಿತ ಆಚರಣೆಗಳು ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಕಂಡುಬಂದಿರುತ್ತವೆ.[೧೦]

**ಹೋಳಿ ಹಬ್ಬ:**

ಇದಕ್ಕೆ ಕಾಮನ ಹಬ್ಬವೆಂದು ಕರೆಯುತ್ತಾರೆ. ಭಾರತದೆಲ್ಲಾ ಭಾಗಗಳಲ್ಲಿಯು ಕಂಡು ಬರುವ ಸಂಪ್ರದಾಯವಿದು. ಭಾರತದಲ್ಲಿ ಆಚರಿಸಲ್ಪಡುವ ಹಬ್ಬಗಳು ಹೆಚ್ಚಾಗಿ ಹೆಣ್ಣು ಮಕ್ಕಳ ಹಬ್ಬಗಳಾಗಿವೆ. ಹೋಳಿಯು ಮಾತ್ರ ಗಂಡು ಮಕ್ಕಳ ಕೇವಲ ಒಂದೇ ಒಂದು ದೊಡ್ಡ ಹಬ್ಬವೆಂದು ಹೇಳಲ್ಪಡುತ್ತದೆ. ಹಬ್ಬ ಹುಣ್ಣಿಮೆಗಳಲ್ಲಿ ಹೆಣ್ಣು ಆನಂದ ಪಡುವುದನ್ನು ಕಂಡು ಗಂಡು ದುಡಿಯುವ ತನಗೆ ಹಬ್ಬವಿಲ್ಲವೆಂದು ದೇವರ ಮುಂದೆದೂರಿಕೊಂಡನಂತೆ. ಆಗ ದೇವರು ಆ ದೂರನ್ನು ಕೇಳಿ ಗಂಡು ಒಮ್ಮೆಯಾದರು ವರ್ಷದಲ್ಲಿ ಪ್ರಪಂಚದ ಭಾರವನ್ನು ಮರೆಯಲೆಂದು ಆಡಲು ಹೋಳಿಯನ್ನು ನಿರ್ಮಿಸಿದನೆಂದು ಪುರಾಣ ಕಥೆಯು ಇದೆ. ಕಾಮನ ವಿಚಾರವಾಗಿ ಋಗ್ವೇದ ಇನ್ನುಳಿದ ವೇಗಗಳಲ್ಲಿಯೂ ಉಲ್ಲೇಖವಿದೆ. ಸ್ಕಂದ ಪುರಾಣದಲ್ಲಿಯೂ, ಶಿವ ಪುರಾಣದಲ್ಲಿಯೂ ಕಾಮದಹನ ಬರುತ್ತದೆ. ಬುದ್ಧನು ಕಾಮವನ್ನು ಗೆದ್ದ ವರ್ಣನೆಗಳು ಬೌದ್ಧ ಸಾಹಿತ್ಯದಲ್ಲಿದೆ. ಜೈನರು ಬೌದ್ಧರು ಹೋಳಿಯನ್ನು ಆಚರಿಸುವವರು. ಆದ್ದರಿಂದ ಹೋಳಿಯ ಹಬ್ಬವು ಅನಾದಿ ಕಾಲದಿಂದಲೂ ನಮಗೆ ಸಂಪ್ರದಾಯವಾಗಿ ಬಂದಿದೆ.

ಹೋಳಿಯ ೧೫ ಅಥವಾ ೨೦ ದಿನಗಳವರೆಗೆ ಆಡುವ ಆಟವಾಗಿದೆ. ಇವರ ಉತ್ಸವವು ಹೋಳಿಯ ಹುಣ್ಣಿಮೆಯಿಂದ ಪ್ರಾರಂಭವಾಗಿ ರಂಗಪಂಚಮಿಯವರೆಗೆ ನಡೆಯುವುದು. ಭರತಖಂಡದಲ್ಲಿ ಕಾಮನ ಕಟ್ಟೆಗಳಿಲ್ಲದ ಹಳ್ಳಿಗಳು ಇಲ್ಲ. ಕಾಮನು ಬಲು ಚಲುವನೆಂಬ ನಂಬಿಕೆಯು ನಮ್ಮಲ್ಲಿದೆ. ಗಂಡು ಮಕ್ಕಳು ಚಲುವಿಕೆಯನ್ನು ಕಾಮನಿಗೆ

ಹೋಲಿಸುವುದುಂಟು. ಈ ಹಬ್ಬ ಬರುವುದು ಬೇಸಿಗೆಯಲ್ಲಿ. ಆಗ ಅದೇ ವಸಂತಾಗಮನ, ವನ ಬನಗಳು ಚಿಗಿತು ಹೂವು ತುಂಬಿ ನಿಲ್ಲುವುದು. ಕಕ್ಷಿಗಳಿಗೆ ಹೊಸ ತುಪ್ಪಳ ಬಂದು ಅಂದವಾಗಿ ಕಾಣುವವು. ನಿಸರ್ಗದಲ್ಲೆಡೆಗಳಲ್ಲಿಯೂ ನವ ಜೈತನ್ಯವು ತುಂಬಿ ಹರಿಯುವುದು. ಈ ಜೈತನ್ಯವು ನಿಸರ್ಗದಿಂದ ಮಾನವನ ಕುಲಕ್ಕೆ ಉಕ್ಕಿ ಬಾರದಿರುವುದೇ? ಆಗ ಮಾನವನಿಗೆ ಇಲ್ಲದ ಹರೆಯುಕ್ಕಿ ಬರುವುದು. ನಡುಹರೆ ಕಳೆದುಕೊಂಡು ಮುದಕರು ಸಹ ನವತರುಣರಾಗಿ ಬಲು ಹುರುಪಿನಿಂದ ಹೋಳಿಯನ್ನಾಡುವರು. ಹೋಳಿ ಹುಣ್ಣಿಮೆಯ ದಿನ ಕಾಮನ ಸುಂದರವಾದ ಪ್ರತಿಮೆಯನ್ನು ಮಾಡಿಸಿ ಶೃಂಗಾರ ಮಾಡಿ ಊರ ಕಾಮನ ಕಟ್ಟೆಯ ಚಾವಣಿಯ ಹಂದರದಲ್ಲಿ ಕಾಮನನ್ನು ಇಡುವ ವಾಡಿಕೆ ಇದೆ. ಕೆಲವು ಭಾಗಗಳಲ್ಲಿ ಕಾಮನ ಎಡಭಾಗಕ್ಕೆ ರತಿ ದೇವಿಯ ಹೆಣ್ಣು ಗೊಂಬೆಯನ್ನು ಇಡುವರು. ಕೆಲವು ಹಳ್ಳಿಗಳಲ್ಲಿ ಸರ್ಕಾರ ಕಾಮನೆಂತಲು, ದೈವದ ಕಾಮನೆಂತಲು, ಓಣಿಯ ಕಾಮನೆಂತಲು ಕಾಮನನ್ನು ಇಡುತ್ತಾರೆ. ಕಾಮದಹನದ ಬಗ್ಗೆ ಜಾನಪದ ಸಾಹಿತ್ಯದಲ್ಲಿ ಒಂದು ಕಥೆಯನ್ನು ಹೇಳಲಾಗಿದೆ. ಕೈಲಾಸದಲ್ಲಿ ಎಲ್ಲಾ ದೇವಾನು ದೇವತೆಗಳಲ್ಲಿ ಚೆಲುವನಾರು ಎಂಬ ಪ್ರಶ್ನೆ ಬಂದಾಗ ಆಗ ಶಿವನು ಜಗತ್ತಿನಲ್ಲಿ ಯಾರು ಚಲುವನೆಂದು ಪಾರ್ವತಿಯನ್ನು ಕೇಳಲು ಅವಳು ಏಕೋಭಾವದಿಂದ ಕಾಮ ಚಲುವನೆಂದು ಅಂದಳಂತೆ ಗಂಡನಿಗೆ ಸಿಟ್ಟು ಬರದೇನುಮಾಡೀತು ಹೆಂಡತಿಯು ಮನೆಯ ಗಂಡನ ಚೆಲುವಿಕೆಯನ್ನು ಒಪ್ಪದೆ ಅನ್ಯಪುರಷನ ಚಲುವನೆಂದು ಸಭೆಯಲ್ಲಿ ಅಂದರೆ ಗಂಡನಿಗೆ ಹೇಗಾಗಬಹುದು ಹಾಗೇ ಮಹಾದೇವನಿಗೆ ಆಗಿದೆ. ಮಡದಿ ಪಾರ್ವತಿಯ ಮಾತನ್ನು ಕೇಳಿ ಕೆರಳಿದ ಶಿವ ತನ್ನ ಉರಿಗಣ್ಣನ್ನೇ ಕಾಮನ ಮೇಲೆ ಬಿಟ್ಟು ಬಿಟ್ಟ. ಹಣೆ ಗಣ್ಣಿನ ದಳ್ಳುರಿ ನಾಲಿಗೆಯನ್ನು ಚಾಚಿ ಲೋಕ ಚೆಲುವ ಕಾಮನನ್ನು ಹಾ ಎನ್ನುವುದರೊಳಗಾಗಿಯೇ ನುಂಗಿ ಬಿಟ್ಟವು. ಕಾಮನು ಸುಟ್ಟು ಬೂದಿಯಾದ ಇಂತಯ ಕಾಮನ ಸ್ಮರಣೆಯೇ ಇಂದು ಹೋಳಿಯಾಗಿದೆ. ಹಾಗೂ ಸಂಪ್ರದಾಯವಾಗಿ ಉಳಿದು ಬಂದಿದೆ.

ಕಾಮನ ಬೂದಿಯಲ್ಲಿ ಒಕ್ಕಲಿಗ ತನ್ನ ಭಾಗದ ವರುಷದ ಮಳೆ ಬೆಳೆಗಳನ್ನು ಅರಿತುಕೊಳ್ಳುವನು. ಕಾಮನ ಬೂದಿಯನ್ನು ಸುಡುವ ಕಾಲಕ್ಕೆ ಯಾವ ದಿಕ್ಕಿಗೆ ಹಾರುವುದೋ ಆ ಭಾಗವು ಮಳೆ ಬೆಳೆಯಿಂದ ಸಮೃದ್ದಿಯಾಗುವುದೆಂದು ನಂಬುವನು. ಕಾಮನ ಬೂದಿಯನ್ನು ತೂರಿದ ಮರುದಿನ ಮಳೆಯಾಗಿ ಬೂದಿಯು ಭೂಮಿಯಲ್ಲಿ ಬೆರೆತರೆ ಲೋಕಕ್ಕೆ ರೋಗಾದಿಗಳ ಭಯವಿಲ್ಲವೆಂದು ಬೆಳೆ ಚೆನ್ನಾಗಿ ಬಂದು ಲೋಕವು ಸುಖದಿಂದ ಬಾಳುವುದೆಂದು ನಂಬುವನು. ಇಂತಹ ಸಂಪ್ರದಾಯದ ಹೋಳಿ ಹುಣ್ಣಿಮೆಯನ್ನು ಪ್ರಾಚೀನ

ಕಾಲದಿಂದಲೂ ಹಾನಗಲ್ಲಿನಲ್ಲಿ ಪ್ರತಿ ವರ್ಷವೂ ಅತ್ಯಂತ ವೈಶಿಷ್ಟ ಪೂರ್ಣವಾಗಿ ಅದ್ದೂರಿಯಿಂದ ಆಚರಿಸುತ್ತಾ ಬಂದಿದ್ದಾರೆ. ಹಾನಗಲ್ಲ ನಗರದ ಪ್ರತಿ ಓಣಿ ಓಣಿಯಲ್ಲಿ ಫಾಲ್ಗುಣ ಮಾಸದಲ್ಲಿ ರತಿ ಮತ್ತು ಕಾಮನ ಮೂರ್ತಿಯನ್ನು ಪ್ರತಿಷ್ಠಾಪಿಸಿ ಹಬ್ಬವನ್ನು ಆಚರಿಸುತ್ತಾರೆ. ಕಾಮದಹನದ ಹಬ್ಬದ ಸಂಸ್ಕೃತಿ ಎಂದರೆ ಮಾನವನಲ್ಲಿರುವ ಅರಷಡ್ ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇನ್ನೂ ಹಚ್ಚಿಗೆ ಹೇಳಬೇಕೆಂದರೆ ಒಂದು ಯುಗದ ಸಮಾಪ್ತಿಯಾಗಿ ಹೊಸಯುಗದ ಆಗಮನದ ನಾಂದಿ ಎಂದು ಹೇಳಬಹುದು. ಹೋಳಿ ಹುಣ್ಣಿಮೆಯ ಈ ಹಬ್ಬವು ಪ್ರಾರಂಭವಾಗುವುದು ಏಕಾದಸಿಯ ದಿವಸ ಕಾಮ ಮತ್ತು ಕಾಮನಿಗೆ ವಿಶೇಷವಾದ ಪೂಜೆ. ಆದಿನ ಹೋಳಿಗೆಯ ನೈವೇಧ್ಯವನ್ನು ಮಾಡುವರು. ನಂತರ ಪಂಚಮಿಯ ದಿವಸ ಕಾಮ ದಹನ ರಂಗುರಂಗಿನ ಓಕುಳಿಯನ್ನು ಆಡುವುದು. ಹಾನಗಲ್ಲ ನಗರದಲ್ಲಿ ಹೋಳಿ ಹುಣ್ಣಿಮೆಯ ವಿಶಿಷ್ಟ ಹಲಗಿಯನ್ನು ಬಾರಿಸುವ ಗುಂಪು ಮಾಡಿಕೊಂಡು ಲಯಬದ್ಧವಾಗಿ ಕರ್ಣಪಟಲಕ್ಕೆ ಆನಂದವನ್ನು ಉಂಟುಮಾಡುವಂತೆ ಹಲಗಿಯನ್ನು ಬಾರಿಸುತ್ತಾರೆ. ಹಾನಗಲ್ಲ ಜನತೆ ಹಲಗಿಯನ್ನು ನುಡಿಸುವ ಲಯಪದ್ಧತಿ ಮತ್ತು ಗಮ್ಮತ್ತು ಕರ್ನಾಟಕದಲ್ಲಿ ಎಲ್ಲೂ ಕಾಣಿಸುವುದಿಲ್ಲವೆಂದು ಅತ್ಯಂತ ಹೆಮ್ಮೆಯಿಂದ ಹೇಳುವುದು ಅತಿಶಯೋಕ್ತಿ ಆಗಲಿಕ್ಕಿಲ್ಲ. ರಂಗಪಂಚಮಿಯಂದು ತಾರಕೇಶ್ವರ ದೇವಾಲಯದ ಎದುರುಗಡೆ ಕಾಮಣ್ಣನ ಸುಟ್ಟು ನಂತರ ಓಣಿಯ ಎಲ್ಲಾ ಕಾಮಣ್ಣನ ಮೂರ್ತಿಗಳು ದಹನವಾಗುತ್ತವೆ. ದೈವದ ಕಾಮವು ಸುಟ್ಟ ನಂತರ ಎಲ್ಲಾ ಓಣಿಯ ಕಾಮಗಳು ದಹನವಾಗುತ್ತವೆ.[೧೧]

**ಅಡಿಟಿಪ್ಪಣಿಗಳು:**

೧. ಸಿ.ಎಸ್. ವಾಸುದೇವನ್ ಹಂಪಿ ಪರಿಸರದ ಕೆರೆಗಳು ಪುಟ-೮೭.

೨. ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲಮೂಲ) ಅನು ದ್ರುವನಾರಾಯಣ ವಿಜಯನಗರ ಸಾಮ್ರಾಜ್ಯದ ನೀರಾವರಿ

ವ್ಯವಸ್ಥೆ ಪುಟ-೧೩೬.

೩. ಎಂ. ಚಿದಾನಂದಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ-೪೪೯.

೪. ಕೊಟ್ರಯ್ಯ ಸಿ.ಟಿ.ಎಂ ಪುರ್ವೋಕ್ತ ಪುಟ-೧೩೮.

೫. ಎಂ.ಎಂ. ಕಲಬುರ್ಗಿ ಧಾರವಾಡ ತಾಲೂಕಿನ ಶಾಸನಗಳು ಪುಟ-೧೨೪

೬. ಕೆ. ಅನಂತರಾಮ ಅಜಾತ ನಾಗಲಿಂಗಸ್ವಾಮಿ ಪುಟ-೬೦.

೭. ವಿಶಾಲಪೋಳ ನವಲಗುಂದ ತಾಲೂಕಿನ ಕೆರೆಗಳ ಅಧ್ಯಯನ ಪುಟ-೫೯.

೮. ವಿ.ಜಿ. ಶಾಂತಪೂರಮಠ ವಿರಾಟನಗರ ಇತಿಹಾಸ ಪುಟ-೮೨.

೯. ಕ್ಷೇತ್ರಕಾರ್ಯ ವರದಿ

೧೦. ಕ್ಷೇತ್ರಕಾರ್ಯ ವರದಿ

# ಅಧ್ಯಾಯ-೬

## ಉಪಸಂಹಾರ

ಹಾನಗಲ್ಲು ಪರಿಸರದ ಚರಿತ್ರೆಯು ಕರ್ನಾಟಕದ ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಬಹಳ ಪ್ರಾಚೀನಕಾಲದಿಂದಲೇ ಮಾನವ ಸಂಸ್ಕೃತಿಯ ಇಲ್ಲಿ ಹುಟ್ಟಿ ಬೆಳೆದು ಸಮೃದ್ಧವಾಗಿದೆ. ಹತ್ತು ಹಲವು ಬಗೆಯ ಚರಿತ್ರೆಗೆ ಬೇಕಾದ ಆಕರಗಳನ್ನು ಪ್ರಾಗೈತಿಹಾಸ ಕಾಲದಿಂದ ಹಿಡಿದು ಬೃಹತ್ ಶಿಲಾ ಸಂಸ್ಕೃತಿಯ ವರೆಗೆ ಇಲ್ಲಿ ಕಾಣಬಹುದಾಗಿದೆ. ಮೌರ್ಯರ ಕಾಲದಿಂದಲೂ ಮಾನವನ ನಾಗರಿಕತೆ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತೆಂಬುದನ್ನು ಗಮನಿಸಬೇಕಾದ ಸಂಗತಿ. ಇಂತಹ ವಿಪುಲ ಮಾಹಿತಿಗಳನ್ನೊಳಗೊಂಡ ಹಾನಗಲ್ಲು ಪ್ರದೇಶವು ಅನೇಕ ಕೆರೆ-ಕಟ್ಟೆ ಮತ್ತು ಬಾವಿಗಳನ್ನು ಹೊಂದಿದ್ದು ಈ ಕ್ಷೇತ್ರದಲ್ಲಿ ಬೆಳಕು ಬೀರುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಕೈಗೊಂಡಿದ್ದೇನೆ.

ಹಾನಗಲ್ಲು ಪರಿಸರವನ್ನು ಭೌಗೋಳಿಕವಾಗಿ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿದ್ದು ಈ ಪರಿಸರವು ೧೫೫ ಗ್ರಾಮಗಳನ್ನು ಒಳಗೊಂಡಿದ್ದು ೪೪ ಗ್ರಾಮಪಂಚಾಯಿತಿಗಳನ್ನು ಈ ಪರಿಸರದಲ್ಲಿ ಜಲ ಸಂಪನ್ಮೂಲಗಳು ವಿಪುಲವಾಗಿದ್ದು ಧರ್ಮಾನದಿ, ಮತ್ತು ವರದಾನದಿಗಳು ಪೂರ್ವಕ್ಕೆ ಹರಿದು ಉತ್ತರಗಡಿಗಳ ಮುಖಾಂತರ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಸಹಕಾರಿಯಾಗಿದೆ. ಹಾಗಾಯೇ ಬನವಾಸಿಯ ಕದಂಬರು, ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು, ವಿಜಯನಗರದ ಅರಸರು, ಸವಣೂರ ನವಾಬರು ಮತ್ತು ಬ್ರಿಟೀಷರು ಈ ಪರಿಸರದಲ್ಲಿ ಆಡಳಿತ ನಡೆಸಿದ್ದಾರೆ. ಈ ಪರಿಸರದಲ್ಲಿ ಕೃಷಿ ನೀರಾವರಿಗೆ ಆದ್ಯತೆ ನೀಡಿ ಹಲವಾರು ಕೆರೆ- ಬಾವಿಗಳನ್ನು ನಿರ್ಮಾಣ ಮಾಡಿಸಿದ್ದಾರೆ. ಹಾಗೂ ಅರಸರಲ್ಲದೆ ಸಾಮಂತರು ಶ್ರೀಮಂತರು, ಇನ್ನು ಮುಂತಾದವರು ಕೆರೆ-ಬಾವಿಗಳ ನೀರಾವರಿಗೆ ಅಂದು ಹೆಚ್ಚಿನ ಆದ್ಯತೆ ನೀಡಿದ್ದರು ಗಮನಾರ್ಹ ಸಂಗತಿ.

ಹಾನಗಲ್ಲು ಪರಿಸರವು ಅರೆಮಲೆನಾಡು ಪರಿಸರವಾಗಿದ್ದು ಮಳೆಯ ಪ್ರಮಾಣ ಅತಿಯಾಗಿ ಮತ್ತು ಕಡಿಮೆಯಾಗಿ ಬಿಳುತ್ತಿದ್ದರಿಂದ ಕೃಷಿ ಚಟುವಟಿಕೆ ಕೆರೆ-ಬಾವಿಗಳನ್ನು ನಿರ್ಮಿಸಿ ನೀರನ್ನು ಸಂಗ್ರಹಿಸುತ್ತಿದ್ದು ಕಾಣಬಹುದು. ಈ ತಾಲೂಕಿನಲ್ಲಿ ಮಳೆಯಾಧರಿತ ಕೆರೆಗಳು ಮತ್ತು ನದಿ ನೀರನ್ನು ಆಧರಿಸಿದ ಕೆರೆಗಳನ್ನಾಗಿ ವಿಭಾಗಿಸಬಹುದಾಗಿದೆ. ಮಳೆ ನೀರು, ಮತ್ತು ನದಿಯ ನೀರನ್ನು ಕೆರೆಗಳಿಗೆ ತುಂಬಿಸಿಕೊಂಡು ಅಂತರ್ಜಲ ಮಟ್ಟವನ್ನು

ಹೆಚ್ಚಿಸುವ ಪ್ರಯತ್ನವನ್ನು ಪ್ರಾಚೀನರು ಅನುಸರಿಸುತ್ತಿದ್ದರು. ಇದರಿಂದ ಬಾವಿ ಮತ್ತು ಕೊಳವೆ ಬಾವಿಗಳಲ್ಲಿ ಇಂದಿಗೂ ನೀರು ಸಾಕಷ್ಟು ಪ್ರಮಾಣದಲ್ಲಿ ಸಿಗುತ್ತಿರುವುದು ಗಮನಾರ್ಹ ಅಂಶ.

ಹಾನಗಲ್ಲು ಪರಿಸರವು ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವ ನೆಲೆಯಾಗಿತ್ತು. ಹಾಗೆಯೇ ಇತಿಹಾಸ ಕಾಲದಲ್ಲಿ ಇದು ಅನೇಕ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿತು. ಈ ಪರಿಸರದ ರೈತರ ಗುಂಪುಗಳು ಕೃಷಿಗೆ, ಕೃಷಿ, ಚಟುವಟಿಕೆಗಳಿಗೆ ಅಗತ್ಯವಾದ ನೀರಾವರಿ ಪದ್ಧತಿಯನ್ನು ಹಂತಹಂತವಾಗಿ ಸ್ಥಾಪಿಸಿಕೊಂಡಿದ್ದಾರೆ. ಈ ನಿಟ್ಟಿನಲ್ಲಿ ಗ್ರಾಮೀಣ ಪ್ರದೇಶದ ರೈತ ಗುಂಪುಗಳು ಹಾಗೂ ಗ್ರಾಮ ಮುಖಂಡರು ಸಣ್ಣ ಪ್ರಮಾಣದ ನೀರಾವರಿ ಕಾಲುವೆಗಳನ್ನು ನಿರ್ಮಿಸಿದರು. ಈ ಪರಿಸರದಲ್ಲಿ ಕದಂಬರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ಕಾಲದ ಹೆಚ್ಚಿನ ಶಾಸನಗಳು ಕೆರೆ ಮತ್ತು ಬಾವಿಗಳ ಕುರಿತು ಉಲ್ಲೇಖಿಸಿರುವುದು ಕಂಡುಬರುತ್ತದೆ. ಈ ಪರಿಸರದಲ್ಲಿ ಒಂಭತು-ಹತ್ತನೆ ಶತಮಾನದಿಂದ ಹದನಾಲ್ಕನೆಯ ಶತಮಾನದವರೆಗಿನ ಕಾಲವನ್ನು ಕೆರೆಗಳ ನಿರ್ಮಾಣದ ಸ್ವರ್ಣ ಯುಗವಾಗಿದ್ದು ದೃಢವಾಗುತ್ತದೆ. ಈ ಪರಿಸರದ ಕೆರೆ-ಬಾವಿಗಳ ಸ್ವರೂಪ ಮತ್ತು ರಚನೆಯ ದೃಷ್ಟಿಯಿಂದ ಎಲ್ಲಾ ಕೆರೆ ಮತ್ತು ಬಾವಿಗಳು ಒಂದೇ ತೆರನಾಗಿ ಕಂಡುಬರುವುದಿಲ್ಲ ಬಹುತೇಕ ಕೆರೆಗಳು ಆಯಿತಾಕೃತಿ, ವೃತ್ತಾಕರ, ಚೌಕಾಕಾರರು ಪ್ರಾಣಿಯ ದೇಹದ ಆಕಾರಗಳಾಗಿವೆ. ಈ ಪರಿಸರವು ಗಡಿನಾಡು ಕರಾವಳಿ ಪ್ರದೇಶವಾಗಿರುವುದರಿಂದ ಬೆಟ್ಟ-ಗುಡ್ಡ ಅರಣ್ಯ ಸಂಪತ್ತು ಇರುವುದರಿಂದ ಉತ್ತಮ ಜಲಾನಯನ ಪ್ರದೇಶ ಹೊಂದಿದೆ. ಎಲ್ಲಾ ಕೆರೆಗಳು ಜಲಾನಯನ ಪ್ರದೇಶದಲ್ಲಿ ಬೀಳುವ ವಾರ್ಷಿಕ ಸರಾಸರಿ ಮಳೆ ಪ್ರಮಾಣವು ಕೂಡಾ ಜಾಸ್ತಿ ಇದೆ. ಈ ಪರಿಸರದ ಕೆರೆಗಳು ಸರಣಿ ವ್ಯವಸ್ಥೆಯಲ್ಲಿ ನಿರ್ಮಿಸಿರುವುದು ಅಂದಿನ ತಾಂತ್ರಿಕತೆಗೆ ಹಿಡಿದ ಕೈಗನ್ನಡಿಯಾಗಿದೆ. ಉದಾ: ಈ ಪರಿಸರದ ಬಹುತೇಕ ಕೆರೆಗಳು ಸರಣಿಕೆರೆ-ಕಟ್ಟೆಗಳನ್ನು ಹೊಂದಿದ್ದು ನೋಡಬಹುದು.

ಕೆರೆಯ ಏರಿಯೂ ಒಡೆಯದಿರಲೆಂದು ಹೆಚ್ಚಿನ ಕಡೆ ಏರಿಯನ್ನು ಆಯ್ತ-ಡೊಂಕಾಗಿ ಹಾವಿನ ಆಕಾರದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಏರಿಯ ಒಳಬಾಗ ಒರಟು ಕಲ್ಲಿನಿಂದ ಕಟ್ಟಲಾಗುತಿತ್ತು. ಏರಿಯ ಕೌಶಲ್ಯವನ್ನು ಈ ಪರಿಸರದ ತಿಳಿವಳ್ಳಿಯ ಕೆರೆ, ಆನೆ ಕೆರೆ, ಮಂತಗಿಯ ಕೆರೆ, ಬೈಚವಳ್ಳಿಯ ಕೆರೆ ಮಕರವಳ್ಳಿಯ ಕೆರೆ, ಗಾಜಿಪುರದ ಕೆರೆ ಮುಂತಾದವುಗಳನ್ನು ಕಾಣಬಹುದು.

ಈ ಪರಿಸರದಲ್ಲಿ ಸಾಮಾನ್ಯವಾಗಿ ಸಣ್ಣ ಕೆರೆಗಳು ಎರಡು ತೂಬು ಮತ್ತು ಎರಡು ಕಾಲುವೆಗಳು ಇದ್ದು ದೊಡ್ಡ ಕೆರೆಗಳಿಗೆ ಆರು ತೂಬು ಆರು ಕಾಲುವೆಗಳನ್ನು ಕಾಣಬಹುದು. ಈ ಪರಿಸರದ ಬಹುತೇಕ ಕೆರೆಗಳ ದಂಡೆಯ ಮೇಲೆ ಪ್ರಾಚೀನ ಶಿವಾಲಯ ಜೀನಾಲಯ ದೇವಸ್ಥಾನಗಳನ್ನು ನೋಡಬಹುದು. ಅದರಂತೆ ಕೆರೆಯ ಏರಿಯ ಮೇಲೆ ವೀರಗಲ್ಲು ಮಾಸ್ತಿಗೆಲ್ಲು ಶಾಸನಗಳು ಆಲದಮರ ಅರಳಿಮರ ಬನ್ನಿಮರ ಬೇವಿನ ಮರಗಳನ್ನು ಕಾಣಬಹುದು. ಈ ಮರಗಳ ಕೆಳಗೆ ನಾಗದೇವತೆಯ ಮೂರ್ತಿಗಳು ಹಾಗೂ ಇತರೆ ದೇವತೆಗಳನ್ನು ಪೂಜೆ ಮಾಡುವುದು ಕಂಡುಬರುತ್ತದೆ. ಈ ಪರಿಸರದಲ್ಲಿ ಬಾವಿಗಳು ಕಡಿಮೆ ಪ್ರಮಾಣದಲ್ಲಿ ಕಂಡು ಬಂದರೂ ಅವುಗಳ ಪ್ರಾಚೀನತೆಯನ್ನು ದೇವಚಸ್ಥಾನದಿಂದ ಕಂಡುಹಿಡಿಯಬಹುದು. ಉದಾಹರಣೆ: ಬಸವನಬಾವಿ, ಕಲ್ಲಬಾವಿ ಕುಂಟನಹೊಸಳ್ಳಿಬಾವಿ; ನಾಗರಬಾವಿ ತಾರಕೇಶ್ವರ ಬಾವಿ ಕಂಡುಬರುತ್ತವೆ.

ಈ ಪರಿಸರದಲ್ಲಿ ಮತ್ತು ಯಾವುದೇ ಹೊಸ ಕೆರೆಗಳನ್ನು ನಿರ್ಮಾಣ ಮಾಡುವ ಅವಶ್ಯಕತೆಯಲ್ಲಿ ಏಕೆಂದರೆ ಅಷ್ಟು ಪ್ರಮಾಣದ ಕೆರೆಗಳು ಈ ಪ್ರದೇಶದಲ್ಲಿ ಕಂಡುಬರುತ್ತದೆ, ಈಗ ಇರುವ ಕೆರೆಗಳನ್ನು ದುರಸ್ತಿ, ಕಾರ್ಯ ಜೋರ್ಣೋದ್ಧಾರವನ್ನು ಮಾಡಿಸುವುದು ಸರ್ಕಾರದ ಕರ್ತವ್ಯವಾಗಿದೆ. ಇಲ್ಲಿರುವ ಕೆರೆಗಳನ್ನು ಎರಡು ವಿಭಾಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಸಣ್ಣ ನೀರಾವರಿ ಇಲಾಖೆ ಹಾಗೂ ಧರ್ಮಾನದಿಯ ಯೋಜನಾ ಇಲಾಖೆ ಹಾಗೂ ಅನೇಕ ಸ್ಥಳೀಯ ಸಂಘ ಸಂಸ್ಥೆಗಳು ಕೆರೆಗಳನ್ನು ಪುನಶ್ಚೇತನವನ್ನು ಮಾಡುವ ಕತ್ಯರ್ವವಾಗಿದೆ. ಈ ಪರಿಸರದ ಕೆರೆಗಳು ಸರಣಿ ವ್ಯವಸ್ಥೆಯನ್ನು ಹೊಂದಿದೆ. ಒಂದು ಕೆರೆಯು ತುಂಬಿದ ನಂತರ ಅದರ ಕೋಡಿಯ ಮೂಲಕ ನೀರು ಮತ್ತೊಂದು ಕೆಂಗೆ ಸೇರುತ್ತದೆ. ಉದಾಃ ಅರಳೇಶ್ವರ ಬೈಚವಳ್ಳಿ ದಶರತಕೊಪ್ಪ ನಿಡಸಂಗಿ ಮುಂತಾದವುಗಳು ಸರಣಿ ಕೆರೆಗಳನ್ನು ಹೊಂದಿದ ಗ್ರಾಮಗಳಾಗಿವೆ. ಈಲ್ಲಿರುವ ಕೆರೆಯ ನೀರಾವರಿ ಪದ್ಧತಿಯು ಬಹಳ ಹಿಂದಿನಿಂದಲೂ ವ್ಯವಸ್ಥಿತಿವಾಗಿ ಇಂದಿನವರೆಗೂ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಕೆರೆ–ಬಾವಿ ಸಂರಕ್ಷಣೆ ನಮ್ಮ ಮುಂದಿನ ತಲೆಮಾರಿಗೂ ಬಿಟ್ಟುಹೋದ ಕೊಡುಗೆ ಎಂದು ತಿಳಿಯಬಹುದು.

ಈ ಪರಿಸರದ ಕೆರೆ–ಬಾವಿಗಳು ನಂಬಿಕೆ ಮತ್ತು ಆಚರಣೆಗಳನ್ನು ಹೊಂದಿವೆ. ಅವುಗಳು ಈ ರೀತಿಯಾಗಿವೆ. ಯುಗಾದಿ, ದಸರಾ, ದೀಪಾವಳಿ, ಸಂಕ್ರಮಣದ ರಾಮಲಿಂಗಶ್ವರ ಜಾತ್ರೆ, ಸಾಗರ ಪಂಚಮಿ, ಗಣೇಶ ಚರ್ಥಿತಿ, ಉರುಸು, ಹೊಂಕಣದ ಹೂಳೆ

ಜಾತ್ರೆ, ಹಿರೂರಿನ ಸೂರ್ಯ ನಾರಾಯಣ ಮತ್ತು ಬಸವನ ಜಾತ್ರೆ ಈ ರೀತಿ ಆಚರಣೆಗಳು ಕೆರೆಯೊಂದಿಗೆ ನಂಬಿಕೆಯನ್ನು ಹೊಂದಿದೆ.

ಒಟ್ಟಾರೆಯಾಗಿ ಹಾನಗಲ್ಲು ಪರಿಸರದಲ್ಲಿ ಕೆರೆ-ಬಾವಿಗಳನ್ನು ನಮ್ಮ ಪೂರ್ವಜರು ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕಾರಣಗಳಿಗೆ ನಿರ್ಮಿಸಿದ್ದರೂ ಇಂದು ನಾವು ಅವುಗಳ ಉಪಯೋಗವನ್ನು ಪಡೆದುಕೊಳ್ಳುತ್ತಿಲ್ಲ. ಈ ಪರಿಸರ ಕೆರೆ-ಬಾವಿಗಳು ರಚನೆ ಮತ್ತು ತಂತ್ರಜ್ಞಾನವನ್ನು ಅಲಕ್ಷಮಾಡಿದ್ದೇ ಆದರೆ ನಮ್ಮ ಮುಂದಿನ ಪೀಳಿಗೆಗೆ ನೀರು ಒಂದು ಮಿಂಚಿನ ವಸ್ತುವಾಗಿ ಕಾಣವುದರಲ್ಲಿ ಸಂಶವಿಲ್ಲ. ಒಂದು ಅಂದಾಜಿನ ಪ್ರಕಾರ ಈ ಪರಿಸರದಲ್ಲಿ ೯೦೦ ಕ್ಕೂ ಹೆಚ್ಚು ಕೆರೆಗಳಿದ್ದು ೬೫ಕ್ಕೂ ಹೆಚ್ಚು ನೀರಾವರಿ ಬಾವಿಗಳು ಇವೆ. ಇವುಗಳನ್ನೆಲ್ಲಾ ಪರಿಗಣಿಸಿದರೆ ಹಾನಗಲ್ಲು ಪರಿಸರವು ಉತ್ತರ ಕರ್ನಾಟಕದ ಕೆರೆಗಳ ರಾಜನೆಂದು ಕರೆದರೆ ಅತಿಶೋಕ್ತಿಯಾಗಲಾರದು.

# ಆಕರ ಗ್ರಂಥಗಳು


೧. ಅರಶಿಣಗುಪ್ಪ ಬಸವರಾಜ, ತಿಳುವಳ್ಳಿ ಪ್ರದೇಶದ ದೇವಾಲಯಗಳ ಒಂದು ಅಧ್ಯಯನ, ಅಪ್ರಕಟಿತ ಎಂ.ಫಿಲ್ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೮.

೨. ಭೋಜರಾಜ ಪಾಟೀಲ : ಕಲಕೇರಿ "ಬಸವೇಶ್ವರ ಜೀರ್ಣೋದ್ಧಾರ" ಟ್ರಸ್ಟ್ ಕಮೀಟಿ, ಕಲಕೇರಿ ಹಾನಗಲ್ಲ ತಾಲೂಕು, ಹಾವೇರಿ ಜಿಲ್ಲೆ ೧೯೯೫.

೩. ಚನ್ನಕ್ಕ ಪಾವಟೆ : ಹಾನಗಲ್ಲ ಕದಬಂದರು, ಜ್ಞಾನಗಂಗಾ ಪ್ರಕಾಶನ ಧಾರವಾಡ ೧೯೯೮.

೪. ಚೆನ್ನಕ್ಕ ಎಲಿಗಾರ : 'ಬಂಕಾಪುರ ಶೋಧ' ಪ್ರಸಾರಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೦.

೫. ಚಿದಾನಂದ ಮೂರ್ತಿ ಎಂ. : ಕನ್ನಡ ಶಾಸನಗಳ ಸಂಸ್ಕೃತಿಕ ಅಧ್ಯಯನ ಪ್ರಸರಾಂಗ ಮೈಸೂರು ವಿ.ವಿ. ೧೯೭೯.

೬. ಚೆನ್ನಕ್ಕ ಪಾವಟೆ : ಮಾಸ್ತಿಕಲ್ಲು, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೫.

೭. ಕಲಬುರ್ಗಿ (ಸಂ) ಎಂ.ಎಂ. ಧಾರವಾಡ ಜಿಲ್ಲಾ ಶಾಸನ ಸೂಚಿ ಧಾರವಾಡ (ಪ್ರ) ೧೯೭೫.

೮. ಕುಲಕರ್ಣಿ ಜಿ.ಡಿ. "ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ. ೨೦೦೭/೦೮.

೯. ಕಲಬುರ್ಗಿ ಎಂ.ಎಂ. ಕರ್ನಾಟಕದ ಪೂರ್ವಚರಿತ್ರೆ ಸಾಧನಾ ಮುದ್ರಣಾಲಯ ಧಾರವಾಡ ೧೯೯೪.

೧೦. ಲಿಂಗರಾಜ ಎಸ್. ಕಮ್ಮಾರ : ಗಿರಿಜಾದುರ್ಗದ ಮಠ 'ಹೆಬ್ಬಾಗಿಲು' ಹಾವೇರಿ ಜಿಲ್ಲಾ ಉತ್ಸವ ಹಾವೇರಿ ೨೦೦೭.

೧೧. ಮಹಾದೇವ ಸಿ ಮತ್ತು ರಮೇಶ ನಾಯಕ ವಾಸುದೇವ ಸಿ.ಎಸ್ : "ಕರ್ನಾಟಕ ದೇವಾಲಯಗಳ ಕೋಶ" ಹಾವೇರಿ ಜಿಲ್ಲೆ " ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೧೨. ಮಹದೇವ ಸಿ. ಕರ್ನಾಟಕ ಪುರಾತತ್ವಶೋಧ ಶ್ರೀ. ಲಕ್ಷ್ಮೀ ಪ್ರಕಾಶ ಶ್ರೀರಂಗಪಟ್ಟಣ. ೨೦೦೧.

೧೩. ನರಸಿಂಹ ಮೂರ್ತಿ ಎ.ವಿ. –ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು ಪ್ರಸಾರಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು ೨೦೧೦.

೧೪. ನಾಗರಾಜು ಡಿ.ಎಂ.: ಕಲ್ಯಾಣ ಚಾಲುಕ್ಯರ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಮೈಸೂರು ವಿ.ವಿ. ೨೦೧೨

೧೫. ನರಸಿಂಹ ಮೂರ್ತಿ : ಎ.ಟಿ. ಚಾಲುಕ್ಯ ವಾಸ್ತು ಶಿಲ್ಪ ಪರಿಚಯ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೬. ರಮೇಶ ನಾಯಕ : ಹಾವೇರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ ಪ್ರಕಟಿತ ಎಂ.ಫಿಲ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೭

೧೭. ಸತೀಶ ಕುಲಕರ್ಣಿ : ಹಾವೇರಿ ತಾಲೂಕು ದರ್ಶನ ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು. ೧೯೮೭

೧೮. ಸೂರ್ಯನಾಥ ಕಾಮತ್ : (ಪ್ರ.ಸಂ) ಕರ್ನಾಟಕ ರಾಜ್ಯ ಗ್ಯಾಜಿಟಿಯರ (೩ ಸಂಪುಟ) ಕರ್ನಾಟಕ ಸರ್ಕಾರ, ಬೆಂಗಳೂರು. ೧೯೮೪

೧೯. ಶ್ರೀಕಂಠಶಾಸ್ತ್ರಿ ಎಸ್. ಭಾರತೀಯ ಸಂಸ್ಕೃತಿ. ೨೦೦೬

೨೦. ಸುಂದರ ಅ. ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಕಲೆ ಬೆಂಗಳೂರು. ೧೯೯೪

೨೧. ಷೇಕ ಅಲಿ (ಪ್ರ.ಸಂ.) ಕರ್ನಾಟಕದ ಚರಿತ್ರೆ ಸಂಪುಟಗಳು ೧ ರಿಂದ ೭ ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೨

೨೨. ಶೇಷ ಶಾಸ್ತ್ರಿ ಆರ್. : ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು. ೧೯೮೨

೨೩. ತಿಪ್ಪೆಸ್ವಾಮಿ ಹೆಚ್ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ ಮೂರ್ತಿ ಮತ್ತು (ಪ್ರಕಾಶಕರು) ಮೈಸೂರು. ೧೯೯೭,

೨೪. ವಿಜಯ ಪೂಣಚ್ಚ (ಸಂ) ಚರಿತ್ರೆ ವಿಶ್ವಕೋಶ ವಿಶ್ವವಿದ್ಯಾಲಯ, ಹಂಪಿ ೨೦೦೧.

೨೫. ಸಿ. ಧನಂಜಯ ಪಾವನ ತಾಲೂಕಿನ ಕೆರೆಗಳು ಎಂ.ಫಿಲ್. ಸಂಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೯.

೨೬. ವಿಶಾಲಮೋಳ ನವಲಗುಂದ ತಾಲೂಕಿನ ಕೆರೆಗಳ ಎಂ.ಫಿಲ್. ಸಂಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೫.

೨೭. ಹನುಮಂತಪ್ಪ ಟಿ. ಚಿತ್ರದುರ್ಗ ಐತಿಹಾಸಿಕ ಕೆರೆಗಳು ಮತ್ತು ಅವುಗಳ ನಿರ್ವಹಣೆ ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ ೨೦೧೧.


Bidar
Gulbarga
Bijapur
Bagalkot
Belgaum
Raichur
Dharwad
Koppal
Gadag
Bellary
N
Uttara
Kannad
Haveri
NOT TO SCALE
Davangere
Shimoga
Udupi
Chitradurga
Chik
maglur
Tumkur
Dakshin
Kannad
Hassan
Kolar
Bangalore
Coorg
Mandya
Mysore
Chamrajnagar


HAVERI
TALUKA/TEHSIL MAP
Dharwad
Gadag
Bellary
Uttara Kannada
Shiggaon
Savanur
Haveri
Hangal
Byadgi
Ranibennur
Hirekerur
Shimoga
Davanagere
Legend
District Boundary
Taluka/Tehsil Boundary
opyright © 2015 www.mapsofindia.com
(Last Updated on 5th Sep 2015)

# HANAGAL TALUK




ShiggaonTaluk

To Shiggaon

From Honnali

Savanur Taluk

From Katur

Bommanahalli

Hangal (TMC)

Akki Alur

Uttar Kannada District

From Pala

To Haveri

Haveri Taluk

To Bidaragaddi

To Haraganahalli

To Kabbur

From Sirsi

Byadgi Taluk

From Santolli

From Shakunavalli

Shimoga District

To Chikkabasur

To Ghalpuji

From Shikaripura

To Byadgi

Hirekerur Taluk

From Huralikoppa

## LEGEND

- State Highway
- Major Roads
- Metal Roads
- River & Tanks
- Town
- Bommanahalli Hobli
- AkkiAlur Hobli
- Hanagal Hobli



ಗುಡಗುಡಿಯ ಕಲ್ಲಿನ ತೂಬು

ಗಜಲಕ್ಷ್ಮೀ ಶಿಲ್ಪ



ಗಾಜಿಪುರದ ಬಾವಿ



ಕುಂಟನ ಹೊಸಳ್ಳಿ ಬಾವಿಯ ಒಳಬಾಗ



ಮಲ್ಲಿಗಾರ ಕೆರೆ



ಉಪ್ಪುಣಸಿ ಕೆರೆಯ ತೂಬು



ತಿಳುವಳ್ಳಿ ಕೆರೆಯ ಪ್ರಾಚೀನ ಕಾಲದ ಕಲ್ಲಿನ ಕಾಲುವೆ



ಅರಳೇಶ್ವರ ಕೆರೆ



ಗಾಜಿಪುರದ ಕೆರೆಯ ಏರಿಯ ಮೇಲ್ಲಿರುವ ವೀರಗಲ್ಲು



ಹೀರೂರು ಗ್ರಾಮದ ಕೆರೆಯ ತೂಬಿನ ಗಜಲಕ್ಷ್ಮೀ ಶಿಲ್ಪ



ಮಕರವಳ್ಳಿ ಕೆರೆಯ ನೀರಾವರಿ ಕಾಲುವೆ



ಹುಡ್ಡಯ್ಯನ ಕೆರೆಯ ಶಾಸನ ಶಿಲ್ಪ



ಹಾನಗಲ್ಲು ಪರಿಸರದ ಗ್ರಾಮಗಳಲ್ಲಿ ಹೋಳಿಹಬ್ಬ



ಕಾಮನ ದಹನ



ತಿಳುವಳ್ಳಿಯ ದೊಡ್ಡ ಕೆರೆಯ ತೂಬು

ಬೈಚವಳ್ಳಿಯ ತಂಗಾಳಿ ಕೆರೆ



ಮಕರವಳ್ಳಿ ಕೆರೆಯ ತೂಬು



ಮಕರವಳ್ಳಿ ಕೆರೆ





ಕೆರೆ ಏರಿಯ ಮೇಲ್ಲಿರುವ ಬರಮಪ್ಪ ದೇವರು



ಆನೆ ಕೆರೆಯ ಜಲಾನಯನ ಪ್ರದೇಶ



ಧರ್ಮಾನದಿಯ ಕಾಲುವೆ

ಆನೆ ಕೆರೆಯ ಕೋಡಿ

ಕಲಗೇರಿ ಕೆರೆ



## ಅರಳೇಶ್ವರ ಕೆರೆಯ ತೂಬು



## ಕಲ್ಲುಬಾವಿ



# ವ್ಯಕ್ತಿಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧. | ಬಿ.ಜಿ. ಶಾಂತಪೂರಮಠ | ೬೪ | ನಿವೃತ್ತ ಪ್ರಾಚಾರ್ಯರು | ಹಾನಗಲ್ಲು |
| ೨. | ಹರೀಶ ಕೆ. | ೩೮ | ಉಪನ್ಯಾಸಕರು | ಹಾನಗಲ್ಲು |
| ೩. | ವಿರೇಶ ಕಪ್ಪಣ್ಣನವರ | ೨೮ | ವ್ಯವಸಾಯ | ಮಲ್ಲಿಗಾರ |
| ೪. | ಫಕ್ಕೀರಪ್ಪ | ೪೯ | ವ್ಯವಸಾಯ | ಬೈಚವಳ್ಳಿ |
| ೫. | ಮಹಮ್ಮದಸಾಬ ನದಾಫ್ | ೪೨ | ವ್ಯವಸಾಯ | ಗಾಜಿಪುರ |
| ೬. | ಹನುಮಂತಪ್ಪ ಹೊಸಮನಿ | ೪೦ | ವ್ಯವಸಾಯ | ಕೊಪ್ಪರಸಿಕೊಪ್ಪ |
| ೭. | ಬಸವನಗೌಡ | ೩೮ | ವ್ಯಾಪಾರ | ಮಕರವಳ್ಳಿ |
| ೮. | ಸುನಿಲ ಕುಮಾರ ಪಾಟೀಲ | ೩೨ | ಗ್ರಾಮ ಪಂಚಾಯತಿ ಸದಸ್ಯರು | ಕಿರವಾಡಿ |
| ೯. | ನಿತಿನ್ ಅರಕಸಾಲಿ | ೩೮ | ವ್ಯಾಪಾರ | ತಿಳವಳ್ಳಿ |
| ೧೦. | ಸುರೇಶ ನಾಗಣ್ಣನವರ | ೩೩ | ಎಸ್.ಡಿ.ಎ. | ಹಾನಗಲ್ಲು |
| ೧೧. | ಮಹೇಶ ಎಂ.ಎನ್. | ೩೭ | ಇಂಜನೀಯರ್ | ಹಾನಗಲ್ಲು |
| ೧೨. | ಬಸವರಾಜಪ್ಪ ದೊಡ್ಡಮನಿ | ೪೭ | ವ್ಯವಸಾಯ | ನಿಡಸಂಗಿ |
| ೧೩. | ರಾಜಶೇಖರ ಮಠದ | ೫೨ | ವ್ಯವಸಾಯ | ಹಿರೂರ |
| ೧೪. | ಚೇತನಗೌಡರ | ೩೮ | ವ್ಯವಸಾಯ | ಗಡಿಯಂಕನಹಳ್ಳಿ |
| ೧೫. | ರಮೇಶ ಹರಿಜನ | ೪೯ | ವ್ಯಾಪಾರ | ಅರಳೇಶ್ವರ |
| ೧೬. | ಫಕ್ಕೀರಪ್ಪ | ೫೦ | ವ್ಯವಸಾಯ | ಅಕ್ಕಿವಳ್ಳಿ |
| ೧೭. | ಹನುಮಂತಪ್ಪ | ೫೨ | ವ್ಯವಸಾಯ | ಕುಂಟನಹೊಸಳ್ಳಿ |
| ೧೮. | ರಾಜಾಸಾಬ | ೬೦ | ವ್ಯವಸಾಯ | ಕುಂಟನಹೊಸಳ್ಳಿ |

